Oct-95

# ವಾಸಂತಿ

ತಿಂಗಳ ಪತ್ರಿಕೆ ಅಕ್ಟೋಬರ್ 1995

- ಆನಂದಿ ಗೋಪಾಲ್-ಕಾದಂಬರಿಯ ಪರಿಚಯಾತ್ಮಕ ಲೇಖನ
- ಜನಪದ ಸಾಹಿತ್ಯದಲ್ಲಿ ಸ್ತ್ರೀ ಚಿತ್ರಣ
- ವಾಸಂತಿ ಬಾಯಿ ಪಡುಕೋಣೆ [1908-1995]

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 12 ಸಂಚಿಕೆ : 5

ಅಕ್ಟೋಬರ್ - 1995

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

**ಸಹ ಸಂಪಾದಕರು :**

ವನಜಾ ವೆಂ.
ಡಾ॥ ಪ್ರಭಾವತಿ ಎಸ್. ವಿ.
ನೀಲಾಂಜನ

ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

**ಸಂಪರ್ಕ ವಿಳಾಸ**

ನಂ. 457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು-560 086

ಸೂಚನೆ : ಬಿಡಿ ಪ್ರತಿ : **3-00 ರೂ.**
ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ...**




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



# ಸಂಪಾದಕೀಯ

ನವ್ಯೋತ್ತರ ಸಾಹಿತ್ಯದಲ್ಲಿ ಸ್ತ್ರೀಯರನ್ನು ಪ್ರಗತಿಪರರನ್ನಾಗಿ ನೋಡಲಾಗಿದೆ. ಎಂಬ ಅಂಶವನ್ನು ದಲಿತ ಲೇಖಕ ಕು. ವೆಂ. ವೀರಭದ್ರಪ್ಪನವರು ತಮ್ಮ ಇತ್ತೀಚಿನ ಟಿ.ವಿ. ಸಂದರ್ಶನದಲ್ಲಿ ನುಡಿದರು. ಸ್ತ್ರೀವಾದದ ಬಗ್ಗೆಗಿನ ಸೂಕ್ಷ್ಮತೆಗಳನ್ನು ಸ್ತ್ರೀವಾದಿ ಲೇಖಕಿಯರ ಬರಹಗಳಿಗಿಂತ ಪುರುಷ ಲೇಖಕರ ಕತೆ/ಕಾದಂಬರಿಗಳಲ್ಲಿ ನೋಡಬಹುದಾಗಿದೆ ಎಂದು ವ್ಯಾಖ್ಯಾನಿಸುತ್ತಾ ಇದಕ್ಕೆ ತಮ್ಮ ಚೆನ್ನಣ್ಣ ವಾಲೀಕಾರ್ ಹಾಗೂ ಶಾಂತರಸರ ಬರವಣಿಗೆಯನ್ನು ಉದಾಹರಿಸಿದರು. ನವ್ಯ ಸಾಹಿತ್ಯದಲ್ಲಿ ಹೆಣ್ಣಿನ ಲೈಂಗಿಕ ಅಭಿವ್ಯಕ್ತಿಯು ಮುಖಕ್ಕೆ ಹೆಚ್ಚು ಒತ್ತು ನೀಡಿದ್ದಾದರೆ, ನವ್ಯೋತ್ತರ ಸಾಹಿತ್ಯದಲ್ಲಿ ಕೊಳಕು ರಾಜಕೀಯದ ಮದ್ಯೆ, ಯಾವುದೇ ಪ್ರಾಮಾಣಿಕತೆ, ಆದರ್ಶಗಳ ಮೌಲ್ಯಗಳನ್ನು ಎತ್ತಿಹಿಡಿಯಲಾಗದ ಅಸೂಹಾಯಕತೆಯಲ್ಲಿ ಕೆಳಗೆ ಬೀಳುವ ಪುರುಷನನ್ನು ಎತ್ತಿ ಹಿಡಿಯುವ ತಾಯ್ತನದ ಸಂಕೇತವಾಗಿ ಲೇಖಕ ಹಾಗೂ ಲೇಖಕಿಯರ ಬರಹಗಳಲ್ಲಿ ಹೆಣ್ಣಿನ ಚಿತ್ರಣ ಮೂಡಿಬಂದದ್ದಿದೆ. ಇದಕ್ಕೆ ಹೊರತಾಗಿ ಸ್ತ್ರೀ ಸಂವೇದನೆಯ ವಿಶಿಷ್ಟತೆ, ಅನನ್ಯತೆಯೆಂದು - ಯಾವ ವಿರೋಧಗಳ ಸಂಘರ್ಷಗಳಿಗೂ ತೆರೆದುಕೊಳ್ಳದೇ ವೈಯಕ್ತಿಕ, ಕೌಟುಂಬಿಕ ನೆಲೆಯಲ್ಲಿ ತ್ಯಾಗ, ಪ್ರೀತಿ, ಪ್ರೇಮದಂತಹ ಮೌಲ್ಯಗಳನ್ನು ಒಡಮೂಡಿಸಿಕೊಂಡ ಪಾತ್ರಗಳನ್ನು ಲೇಖಕಿಯರು ಚಿತ್ರಿಸಿರುವುದೂ ಕಂಡುಬರುತ್ತದೆ. ನವ್ಯದ ಲೈಂಗಿಕ ಅಭಿವ್ಯಕ್ತಿಯ ಬಿಚ್ಚಿಡುವಿಕೆಯಾಗಲೀ, ನವ್ಯೋತ್ತರದ ತಾಯ್ತನದ ಚಿತ್ರಣವಾಗಲೀ, ಸ್ತ್ರೀ ವಿಶಿಷ್ಟತೆಯ ತ್ಯಾಗ, ಸಹಾನಾ ಮೂರ್ತಿಯ ಹೆಣ್ಣಿನ ಚಿತ್ರಣವಾಗಲೀ ಸ್ತ್ರೀ ವಾದಿಗಳು ಬಯಸುವ ರಕ್ತ, ಮಾಂಸ ತುಂಬಿದ ಹೆಣ್ಣಿನ ಆದರ್ಶ ಚಿತ್ರಗಳಲ್ಲ. ಸ್ತ್ರೀಯರ ಬದುಕಿನ ಸಾಮಾಜಿಕ, ವೈಯಕ್ತಿಕ, ರಾಜಕೀಯ ಆಯಾಮಗಳಲ್ಲಿ ವಿರೋಧ / ವೈರುದ್ಯಗಳ ಸಂಘರ್ಷವಿರುವ ವಾಸ್ತವ ನಮ್ಮ ಕಣ್ಣ ಮುಂದೆ ಇದೆ. ಈ ಎಲ್ಲಾ ವಿರೋಧಗಳ ಸಂಘರ್ಷಗಳ ನಡುವೆಯೇ ಹೆಣ್ಣಿನ ವ್ಯಕ್ತಿತ್ವದ ಸಮಗ್ರತೆಯ ವಿಷನ್ ಸಾಹಿತ್ಯದಲ್ಲಿ ಮೂಡಿ ಬರಬೇಕಿದೆ. ಸ್ತ್ರೀವಾದಿಗಳೆಂದು ಕರೆದುಕೊಳ್ಳುವ ಲೇಖಕ/ಲೇಖಕಿಯರು ತಮ್ಮ ಗ್ರಹಿಕೆಗಳ ಮಿತಿಯಲ್ಲಿಯೇ ಸಾಹಿತ್ಯದಲ್ಲಿ ಸ್ತ್ರೀವಾದವನ್ನು ಅರ್ಥೈಸ ತೊಡಗಿದ್ದಾರೆ. ಸ್ತ್ರೀವಾದ ಎಂದು ಗುರುತಿಸಬಹುದಾದ ಹೆಜ್ಜೆಗಳು ಕನ್ನಡ ಸಾಹಿತ್ಯದಲ್ಲಿ ಮೂಡಿ ಬಂದಿವೆಯೇ ಹೊರತು ಸ್ತ್ರೀವಾದದ ಮಹತ್ವದ ಹೆಜ್ಜೆ ಎಂದು ಗುರುತಿಸಬಹುದಾದಂತಹ ಸ್ತ್ರೀವಾದದ ಸಮಗ್ರತೆಯ ವಿಷನ್ ಇರುವ ಕಾದಂಬರಿಯೊಂದರ ಕೊರತೆ ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುತ್ತಿರುವಾಗ ಸ್ತ್ರೀವಾದಿಗಳೆಂದು ಗುರುತಿಸಿಕೊಳ್ಳುವ ಲೇಖಕ/ಲೇಖಕಿಯರು ಜವಾಬ್ದಾರಿಯ ಗ್ರಹಿಕೆ, ಚಿಂತನೆಗಳೊಂದಿಗೆ ಜವಾಬ್ದಾರಿಯುತ ಹೇಳಿಕೆ ನೀಡುವ ಅಗತ್ಯ ಇದೆಯೆಂದು ನಾವು ಭಾವಿಸುತ್ತೇವೆ.

# ಆನಂದೀ ಗೋಪಾಲ್ - ಕಾದಂಬರಿಯ ಪರಿಚಯಾತ್ಮಕ ಲೇಖನ

**ಚಂಪಾವತಿ ಎಚ್. ಎಸ್.**

"ನಾನು ಏನು ಹೇಳುತ್ತೇನೋ ಅದೆಲ್ಲಾ ನೀನು ಓದಬೇಕು. ನೀನು ನನಗಿಂತ ಹೆಚ್ಚು ಬುದ್ಧಿವಂತೆಯಾಗಬೇಕು, ನನಗೆ ಗೊತ್ತಿಲ್ಲದಿರುವುದನ್ನು ಮತ್ತು ಯಾವ ಗಂಡಸರೂ (ಸಂಪ್ರದಾಯಬದ್ಧ ಹಿಂದೂಗಳು) ಬಲ್ಲದಿರುವುದನ್ನು ನೀನು ಕಲಿಯುತ್ತೀಯೆ". ಗೋಪಾಲ್‌ರಾವ್ 1877ರಲ್ಲಿ ತನ್ನ ಹೆಂಡತಿ ಆನಂದೀಬಾಯಿಗೆ ಈ ಮಾತುಗಳನ್ನು ಹೇಳಿದ್ದು. ಆಗ ಆಕೆಗೆ ಹನ್ನೆರಡು ವರ್ಷ ಮಾತ್ರ. ಹೆಂಗಸರಿಗೆ ಶಿಕ್ಷಣ ಅತ್ಯಗತ್ಯ ಎಂದು ನಂಬಿದ್ದ ಗೋಪಾಲ್‌ರಾವ್ ತನ್ನೆಲ್ಲಾ ವೈರುದ್ಧ್ಯಗಳೊಂದಿಗೇ ಹೋರಾಡಿ. ಎಲ್ಲರ ವಿರೋಧ ಕಟ್ಟಿಕೊಂಡು ಸಹ ತನ್ನ ಹೆಂಡತಿ ಆನಂದೀಬಾಯಿ ಅಮೇರಿಕಾಕ್ಕೆ ಹೋಗಿ ಭಾರತದ ಪ್ರಥಮ ವೈದ್ಯೆಯಾಗುವಲ್ಲಿ ಸಹಕರಿಸುತ್ತಾನೆ. ಇಂಡಿಯಾದ ಪ್ರಥಮ ವೈದ್ಯೆಯಾದ ಆನಂದೀಬಾಯಿ ಕುರಿತ 'ಆನಂದೀ ಗೋಪಾಲ್' ಮರಾಠಿಯಲ್ಲಿ ಬರೆದವರು ಎಸ್.ಜೆ. ಜೋಷಿ. ಮರಾಠಿಯಿಂದ ಇದನ್ನು ಇಂಗ್ಲೀಷಿಗೆ ಅನುವಾದಿಸಿದವರು ಆಶಾ ಧಾಮ್ಲೆ. ಈ ಕಾದಂಬರಿ ಮೂಲಭೂತವಾಗಿ ಹೆಣ್ಣಿನ ವಿಚಾರದಲ್ಲಿ ಪ್ರಗತಿಪರವಾಗಿರ ಬಯಸುವ ಗಂಡಸಿನ ವ್ಯಕ್ತಿತ್ವದ ವೈರುಧ್ಯದ ಸೂಕ್ಷ್ಮಗಳನ್ನು, ಸಂಪ್ರದಾಯಗಳೊಂದಿಗೆ ತಳಕು ಹಾಕಿಕೊಂಡಿರುವ ಹೆಣ್ಣಿನ ಮನಸ್ಸು, ವ್ಯಕ್ತಿತ್ವ, ಪ್ರಗತಿಪರತೆ–ಆಧುನಿಕತೆ ಹಾಗೂ ಸ್ವಾತಂತ್ರ್ಯದ ಕನಸುಗಳೊಂದಿಗೆ ತಳಕು ಹಾಕಿಕೊಂಡಾಗ ಪಡೆದುಕೊಳ್ಳಬಹುದಾದ ಸಂವೇದನಾತ್ಮಕ ಶಕ್ತಿಗಳನ್ನು ನಮ್ಮ ಮುಂದೆ ಬಿಚ್ಚಿಡುತ್ತದೆ. 19ನೆಯ ಶತಮಾನದ ಸುಧಾರಣಾವಾದಿ ಕಾಲದಲ್ಲಿನ ಹೆಣ್ಣಿನ ಬಗ್ಗೆಗಿನ ಕಲ್ಪನೆಗಳನ್ನು, ವಸಾಹತು ಸಾಮ್ರಾಜ್ಯ ವ್ಯವಸ್ಥೆಯಲ್ಲಿನ ವೈರುದ್ಧ್ಯಗಳನ್ನೂ ಸಹ ಈ ಕಾದಂಬರಿ ನಮಗೆ ತೆರೆದಿಡುತ್ತದೆ. ಆನಂದೀಬಾಯಿಯ ವಾಸ್ತವ ಜೀವನ ಆಧರಿಸಿ ಬರೆದ ಈ ಕಾದಂಬರಿ ಆಕೆಯ ಬದುಕಿನ ಎಲ್ಲಾ ಆಯಾಮಗಳನ್ನು ನಮ್ಮ ಮುಂದೆ ತೆರೆದು ಇಡುವುದರಿಂದ ಆಕೆಯ ಬಗ್ಗೆ ಓದುವ ವರದಿ, ಜೀವನ ಚರಿತ್ರೆ ಇತ್ಯಾದಿಗಳಿಗಿಂತ ಇದು ಹೆಚ್ಚು ಪ್ರಭಾವಶಾಲಿಯಾಗಿದೆ. 22 ವರ್ಷಕ್ಕೇ ಟಿ.ಬಿ.ಯಿಂದ ನರಳಿ ಪ್ರಾಣ ತೆತ್ತ ಆನಂದೀಬಾಯಿಯ ಜೀವನ, ವ್ಯಕ್ತಿತ್ವ ಕುರಿತ ಈ ಕಾದಂಬರಿ ನಮ್ಮೆಲ್ಲರಿಗೂ ಸ್ಫೂರ್ತಿಯಾಗುವ ಸೆಲೆಗಳನ್ನು ಹೊಂದಿರುವುದರಿಂದ ಇದರ ಪರಿಚಯಾತ್ಮಕ ಲೇಖನವನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ.

—ಸಂ. ಮ.

ಆನಂದೀಬಾಯಿ – ಈ ಕಾದಂಬರಿಯಲ್ಲಿ ಹಲವಾರು ರೀತಿಯ ಚಿತ್ರಣಗಳು ನಮಗೆ ದೊರೆಯುತ್ತವೆ. ವಿಧವೆಯನ್ನೇ ಮದುವೆಯಾಗಬೇಕು. ತನ್ನ ಹೆಂಡತಿ ವಿದ್ಯಾವಂತಳಾಗಿರಬೇಕು, ಶಿಕ್ಷಣ ಮಹಿಳೆಯರಿಗೆ ಅತ್ಯವಶ್ಯ ಎಂದು ಮೂಲಭೂತವಾಗಿ ನಂಬಿದ ಗೋಪಾಲ್‌ರಾವ್ 35 ವರುಷದ ಚಿಂತಕ. ಪೋಸ್ಟ್ ಆಫೀಸಿನಲ್ಲಿ ಬರಿಯ ಕ್ಲರ್ಕ ಆಗಿ ಕೆಲಸ ಮಾಡುವ ಈತನ ಮೊದಲ ಹೆಂಡತಿ ತೀರಿದಾಕ್ಷಣ ಎರಡನೇ ಮದುವೆಯಾದರೆ ವಿಧವೆಯನ್ನೇ ಎಂದು ನಿರ್ಧರಿಸುತ್ತಾನೆ. ಗೋಪಾಲ್‌ರಾವ್ ಬಗ್ಗೆ ಗೊತ್ತಿರುವವರೆಲ್ಲರ ಅಭಿಪ್ರಾಯದ ಪ್ರಕಾರ ಆತ ಒಬ್ಬ ವಿಚಿತ್ರದ ಮನುಷ್ಯ. ಜನರ ಜೊತೆ, ಗೌರವಗಳ ಜೊತೆ ಎಲ್ಲರ ಹಾಗೆ ಹೊಂದಾಣಿಕೆ ಮಾಡಿಕೊಳ್ಳುವವನಲ್ಲ. ವಿಧವೆಯನ್ನೇ ಮದುವೆಯಾಗಬೇಕು ಎಂದು ಪ್ರಯಿತ್ನಿಸುವ ಗೋಪಾಲ್‌ರಾವ್ ಅದಕ್ಕಾಗಿ ವಿಫಲ ಪ್ರಯತ್ನ ನಡೆಸುತ್ತಾನೆ. ಪೂನಾದಲ್ಲಿ ಸಮಾಜ ಸುಧಾರಕರೊಬ್ಬರ ಸಂಬಂಧಿಯೊಬ್ಬಳನ್ನು ಮದುವೆಯಾಗಲು ಪ್ರಯತ್ನಿಸಿ ಸೋಲುತ್ತಾನೆ. ಪೋಸ್ಟ್ ಆಫೀಸಿನಲ್ಲಿ ಬರಿಯ ಕ್ಲರ್ಕ್ ಆಗಿರುವ ಗೋಪಾಲ್‌ರಾವ್ ಆಕೆಗೆ ಲಾಯಕ್ಕಲ್ಲ ಎಂದು ತಿರಸ್ಕರಿಸಲ್ಪಟ್ಟಾಗ ಆತನಿಗೆ ನಿರಾಸೆಯಾಗುತ್ತದೆ. ಆಕೆಯ ಮದುವೆ ಐವತ್ತು ವರುಷದ ಶ್ರೀಮಂತನೊಂದಿಗೆ ನಡೆದುಹೋಗುತ್ತದೆ. ನಂತರದಲ್ಲಿ ಯಮು ಎಂಬ 9 ವರುಷದ ಚಿಕ್ಕ ಹುಡುಗಿಯೊಡನೆ ಮದುವೆಯಾಗಲು ಒಪ್ಪುತ್ತಾನೆ. ಹುಡುಗಿಗೆ ತಾನು ಶಿಕ್ಷಣ ಕೊಡಿಸಿಯೇ ಕೊಡಿಸುತ್ತೇನೆ ಎಂಬ ಶರತ್ತಿನೊಂದಿಗೆ ಆಕೆಯ ಮದುವೆಯಾಗಲು ಒಪ್ಪುತ್ತಾನೆ. ಅವರೆಲ್ಲರಿಗೂ ಇದೆಂತಹ ಬೇಡಿಕೆ ಎನಿಸುತ್ತದೆ. ಅಡಿಗೆ ಮನೆಯಲ್ಲಿಯೇ ಬಾಳಿ ಬದುಕಬೇಕಾದ ಹೊಸ್ತಿಲಾಚೆ ಕಾಲಿಡಬಾರದ, ಸೆರಗು ಹೊದ್ದು ಗಂಡಸಿನ ಹಿಂದೆ ಹೆಜ್ಜೆ ಇಡಬೇಕಾದ ಹೆಂಗಸಿಗೆ ಶಿಕ್ಷಣ ಏಕೆ ಬೇಕು ಎಂಬುದು ಯಮುಳ ಮನೆಯವರ ಆತಂಕ. ಆದರೂ ಹುಡುಗಿ ಮೈನೆರೆಯುವ ಮುಂಚೆಯೇ ಮದುವೆ ಮಾಡಿಬಿಡಬೇಕು, ಇಲ್ಲದಿದ್ದರೆ ಸಮಾಜದ ಬಹಿಷ್ಕಾರಕ್ಕೆ

ಒಳಗಾಗಬೇಕಾಗುತ್ತದೆ ಎಂಬ ಹೆದರಿಕೆಯಲ್ಲಿಯೇ ಯಮುನಳನ್ನು ಈ ವಿಚಿತ್ರ ಮನುಷ್ಯ ಗೋಪಾಲ್ ರಾವ್‌ಗೇ ಕೊಟ್ಟು ಮದುವೆ ಮಾಡಲು ನಿರ್ಧರಿಸುತ್ತಾರೆ. ಒಂಭತ್ತು ವರುಷದ ಹುಡುಗಿಗೆ 35 ವರುಷದ ವಿಧುರನೊಂದಿಗೆ ಮದುವೆ. ಒತ್ತಾಯಕ್ಕೆ ಒಪ್ಪಿಕೊಂಡು ಬಿಡುವ ಗೋಪಾಲ್‌ರಾವ್ ಮದುವೆಯ ದಿನವೇ ಪೂನಾಕ್ಕೆ ಹೋಗಿ ಶಿಕ್ಷಣವಂತ ವಿಧವೆಯನ್ನು ಮದುವೆಯಾಗಲು ಪ್ರಯತ್ನಿಸಿ, ವಿಫಲನಾಗಿ, ಅವಮಾನಿತನಾಗಿ ಹಿಂದಿರುಗಿ ಬರುತ್ತಾನೆ. ಇತ್ತ ಯಮುನಳ ಮದುವೆಯ ದಿನ ಮದುವೆಯ ಗಂಡೇ ಮದುವೆಗೆ ಬರದೇ ಹೋದುದರಿಂದ ಹುಡುಗಿಯ ಬಾಳೇ ಹಾಳಾಯಿತು ಎನ್ನುವಾಗ ಮತ್ತೆ ಈ ವಿಚಿತ್ರ ವ್ಯಕ್ತಿ ಕಾಣಿಸಿಕೊಳ್ಳುತ್ತಾನೆ. ಮತ್ತೆ ಮದುವೆಯಾದರೂ ಅದೇ ಹಟ. ಎಲ್ಲರೂ ಹುಚ್ಚು, ವಿಚಿತ್ರ ಮನುಷ್ಯ ಎಂದರೂ ಈತ ಬಗ್ಗಲಾರ. 'ನನ್ನ ಹೆಂಡತಿ ಓದಬೇಕು, ಆಕೆ ವಿದ್ಯಾವಂತೆಯಾಗಬೇಕು' ಎಂಬುದೇ ಆತನ ಹಟ. 35 ವರ್ಷದ ತನಗೆ ಒಂಭತ್ತು ವರ್ಷದ ಯಮುನಳ ಜೊತೆ ದೈಹಿಕ ಆಸೆಗಳಾದರೂ ಪೂರೈಕೆಯಾದಾವೇ ಎಂಬ ವೈರುಧ್ಯಗಳ ಅಡಿಯಲ್ಲಿಯೇ ಆತಮದುವೆ ನಡೆದು ಹೋಗಿ 'ಯಮು' – ಆನಂದೀಬಾಯಿಯಾಗುತ್ತಾಳೆ.

ಮದುವೆಯ ನಂತರ ಸ್ಲೇಟು, ಬಳಪ, ಪುಸ್ತಕ ಹಿಡಿದು ಈತ ಕದ್ದು ಮುಚ್ಚಿ ಹೆಂಡತಿಗೆ ಕಲಿಸುವುದನ್ನು ನೋಡಿದರೆ ಎಲ್ಲರಿಗೂ ಸಿಟ್ಟು. ಅತಿರೇಕದ ಮನುಷ್ಯ ಎಂಬ ಭಾವನೆ. ಶಿಕ್ಷಣವಂತಳಾದರೆ ಆಕೆ ಬೇರೆಯವರ ಜೊತೆ ಹೋಗಿಬಿಡಬಹುದು ಎಂದು ಬುದ್ಧಿ ಹೇಳಿದರೂ ಈತ ಕೇಳಲಾರ. ಹೆಂಡತಿಯನ್ನು ಕರೆದುಕೊಂಡು ತನ್ನದೇ ಮನೆಯಲ್ಲಿ ಬದುಕಲು ಪ್ರಾರಂಭಿಸಿದಾಗಲು ಆನಂದೀಬಾಯಿ ಹೆಚ್ಚು ಸಮಯ ಅಡಿಗೆ ಮನೆಯಲ್ಲಿ ಕಳೆಯತೊಡಗಿದರೆ ಈತನಿಗೆ ಸಿಟ್ಟು. ಓದು, ಓದು ಎನ್ನುವ ಒತ್ತಾಯ. ಗಂಡನ ಭಯಕ್ಕೆ ಒತ್ತಾಯಕ್ಕೆಂದು ಓದಲು, ಬರೆಯಲು ಪ್ರಾರಂಭಿಸಿದ ಆನಂದೀಬಾಯಿಗೆ ದಿನ ಕಳೆದಂತೆ ಹೊರಗಿನ ಪ್ರಪಂಚದ ಬಗ್ಗೆ, ಶಿಕ್ಷಣದ ಬಗ್ಗೆ ಆಕೆಯಲ್ಲಿಯೇ ಒಂದು ರೀತಿಯ ಆಸಕ್ತಿ ಮೂಡತೊಡಗುತ್ತದೆ. ಕ್ರಮೇಣವಾಗಿ ಆಕೆ ಇಂಗ್ಲೀಷ್ ಕಲಿಯಲು ಪ್ರಾರಂಭಿಸುತ್ತಾಳೆ. ಅದು ಯಾಕೆ ಹೀಗೆ? ಇದು ಹೇಗೆ? ಇಂತಹ ಪ್ರಶ್ನೆಗಳು ಆಕೆಯಲ್ಲಿ ಕ್ರಮೇಣವಾಗಿ ಮೂಡತೊಡಗುತ್ತವೆ. ಹೆಂಗಸರ ಬದುಕು ಗೋಡೆಯೊಳಗೆ ಹೇಗೆ ಬಂಧಿತವಾಗುತ್ತಿದೆ ಎಂಬುದರ ಬಗ್ಗೆ ಕೂಡಾ ಆಕೆಯ ಗಮನ ಹರಿಯತೊಡಗುತ್ತದೆ. ಒಂದು ಮಗು ಆಗಿ ಸತ್ತು ಹೋದಾಗಲೂ ಗೋಪಾಲ್ ರಾವ್ ಗಮನ ಆಕೆಯ ಶಿಕ್ಷಣದ ಬಗ್ಗೆಯೇ ತೀವ್ರವಾಗಿ ಇರುತ್ತದೆ. ಕ್ರಮೇಣ ಮರಾಠಿಯ ಹಲವಾರು ಕಾದಂಬರಿಗಳನ್ನು ಓದುವಷ್ಟರ ಮಟ್ಟಿಗೆ ಆನಂದೀಬಾಯಿ ಬೆಳೆಯತೊಡಗುತ್ತಾಳೆ.

ಗೋಪಾಲ್‌ರಾವ್ ಹಾಗೂ ಆನಂದೀಬಾಯಿಯ ಸಂಬಂಧ ಕ್ರಮೇಣವಾಗಿ ಸಂಪ್ರದಾಯಬದ್ಧ ಸಂಕೋಲೆಗಳನ್ನು ಮುರಿಯುವಂತಹ ಸಂಬಂಧವಾಗಿ ರೂಪಿತಗೊಳ್ಳತೊಡಗುತ್ತದೆ. ಅವನು ಜ್ಞಾನಿಯಾಗಿ, ಅವಳು ಪಡೆದುಕೊಳ್ಳುವವಳಾಗಿ ; ಗುರು-ಶಿಷ್ಯರ ಸಂಬಂಧವಾಗಿ ಅವರಿಬ್ಬರ ಸಂಬಂಧ ರೂಪು ಪಡೆಯತೊಡಗಿದಾಗ ಆನಂದೀಬಾಯಿಗೆ ಈ ಸಂಬಂಧ ಆತ್ಮೀಯವಾಗಿ ಕಾಣಿಸತೊಡಗುತ್ತದೆ. ಅಕ್ಕ–ಪಕ್ಕದವರ ಮಾತಿಗೆ, ನೆರೆಹೊರೆಯವರು, ಸಂಬಂಧಿಕರ ಮಾತುಗಳಿಗೆ ಆಕೆ ಕಿವಿಗೊಡಲಾರದಷ್ಟು ಮಟ್ಟಿಗೆ ಬೆಳೆಯತೊಡಗುತ್ತಾಳೆ. ಗಂಡ/ಹೆಂಡತಿ ಇಬ್ಬರೇ ವಾಕಿಂಗ್ ಹೋಗುವುದು ಅಪಹಾಸ್ಯದ ಸಂಗತಿ ಎನ್ನುವ ಜನರ ಮಧ್ಯವೇ ಇವರೀರ್ವರು ಗೆಲಿಲಿಯೋ ಬಗ್ಗೆ ಮಾತನಾಡುತ್ತಾ ಸಮುದ್ರದ ಅಂದ-ಚಂದ ಸವಿಯುವಂತಹ ವ್ಯಕ್ತಿಗಳಾಗುತ್ತಾರೆ. ಇಬ್ಬರೇ ನಡೆದು ಹೋಗುವುದನ್ನು ನೋಡಿ ಆಡಿಕೊಳ್ಳುವವರೇ ಹೆಚ್ಚು. ಸಹಿಸದವರೊಬ್ಬರು ಮೇಲಿನ ಮಹಡಿಯಿಂದ ಇವರ ತಲೆಯ ಮೇಲೆ ಕಸ–ಕಡ್ಡಿ ಚೆಲ್ಲಿದ್ದೂ ಉಂಟು. "ಆಹಾ ಎಷ್ಟು ದೊಡ್ಡ ಮನುಷ್ಯ, ಹೆಂಡತಿಯ ಜೊತೆ ವಾಕಿಂಗ್ ಹೋಗುತ್ತಿದ್ದಾನೆ. ಆಹಾ ಎಷ್ಟು ದೊಡ್ಡ ಬುದ್ಧಿವಂತ' ಎನ್ನುವ ಕುಹಕ ಮಾತುಗಳ ನಡುವೇ ಇವರಿಬ್ಬರೂ ನಡೆದು ಬರುತ್ತಾರೆ. ಮೊದಲ ದಿನಗಳಲ್ಲಾಗಿದ್ದರೆ ಗೋಪಾಲ್‌ರಾವ್ ಸಮಾಧಾನಿಸಬೇಕಿತ್ತು. ಈಗ ಆನಂದೀಬಾಯಿ ಹೇಗೆ ಬೆಳೆದಿದ್ದಾಳೆಂದರೆ ಆಕೆಯೇ ಗಂಡನಿಗೆ ಒಂದು ಪದ್ಯ ನೆನಪಿಸುತ್ತಾಳೆ.

> Tradition ! You have such
> Unparalled hold on society.
> No science can even trade
> in your territory.

ಗೋಪಾಲ್‌ರಾವ್ ಪ್ರಯತ್ನಗಳು ಇಲ್ಲಿಗೇ ನಿಲ್ಲುವುದಿಲ್ಲ. ಆಕೆಗೆ ಇಂಗ್ಲೀಷ್ ಕಲಿಯಲು ಅನುಕೂಲವಾಗಲಿ ಎಂದು ಕೊಲ್ಹಾಪುರಕ್ಕೆ ವರ್ಗ ಮಾಡಿಸಿಕೊಳ್ಳುತ್ತಾನೆ. ಹೊಸ ಪ್ರಪಂಚವೊಂದಕ್ಕೆ ತನ್ನ ಹೆಂಡತಿ ಕಾಲಿಡುವಂತೆ ಮಾಡುವುದು ಆತನ ಉದ್ದೇಶ. ಕ್ರಿಶ್ಚಿಯನ್‌ರಿಂದ ನಡೆಸುವ ಶಾಲೆಯಲ್ಲಿ ಹೆಂಡತಿ ಕಲಿಯಲಿ ಎಂಬ ಆಸೆ. ಹೀಗೆ ಕ್ರಿಶ್ಚಿಯನ್ ವಲಯಕ್ಕೆ ಆನಂದೀಬಾಯಿಯನ್ನು ಪರಿಚಯಿಸುವ ಗೋಪಾಲ್‌ರಾವ್ ಅಲ್ಲಿಂದ ಆಕೆಯಲ್ಲಿನ ಚಿಗುರೊಡೆದ ಆಸಕ್ತಿಗಳು ಗಗನಕ್ಕೆ ತಲಪುವ ಮಹಾತ್ವಾಕಾಂಕ್ಷೆಯ ಏಣಿ ಹತ್ತಲು ಸಹಕರಿಸುತ್ತಾನೆ. ಕ್ರಿಶ್ಚಿಯನ್ ವಲಯ ಗೋಪಾಲ್‌ರಾವ್ ಹಾಗೂ ಆನಂದೀಬಾಯಿಯವರ ಉತ್ಸಾಹಕ್ಕೆ ನೀರೆರೆಯುತ್ತದೆ. ಮತ್ತೆ ಗೋಪಾಲ್‌ರಾವ್ ಕನಸುಗಳು ಅಮೇರಿಕಾದತ್ತ ಸರಿಯುತ್ತವೆ. ಹೆಂಡತಿ ಅಮೇರಿಕಾಕ್ಕೆ ಹೋಗಿ ಡಾಕ್ಟರ್ ಆಗಬೇಕು ಎನ್ನುವ ಬಯಕೆ ಅವನಲ್ಲಿ ಚಿಗುರೊಡೆಯತೊಡಗುತ್ತದೆ. ಕ್ರಿಶ್ಚಿಯನ್ ಫಾದರ್ಸ್ ಇದನ್ನು ಪ್ರೋತ್ಸಾಹಿಸಿದರೂ ಅವರು ಕ್ರಿಶ್ಚಿಯಾನಿಟಿಗೆ ಸೇರಿಕೊಂಡಲ್ಲಿ ಹೋಗುವುದು ಸುಲಭ ಎನ್ನುತ್ತಾರೆ. ಹಿಂದೂ ಸಂಪ್ರದಾಯವಾದಿಗಳೊಡನೆ ಕ್ರಿಶ್ಚಿಯನ್‌ರ ಉದಾರವಾದೀ ರೀತಿ-ನೀತಿಗಳನ್ನು ಪ್ರತಿಪಾದಿಸುವ ಗೋಪಾಲ್‌ರಾವ್-ಕ್ರಿಶ್ಚಿಯನ್‌ರೊಡನೆ ಹಿಂದೂ ಧರ್ಮವನ್ನು ಎತ್ತಿ ಹಿಡಿಯುತ್ತಾನೆ. ಹೆಂಡತಿಯ ವಿದ್ಯಾಭ್ಯಾಸಕ್ಕೋಸ್ಕರ ಕ್ರಿಶ್ಚಿಯನ್ ಆಗುವುದು ಅವನ ಮನಸ್ಸಿಗೆ ಒಪ್ಪಿತವಾಗದ ವಿಚಾರ. ಆಕೆಯ ಅಮೇರಿಕಾದ ಪ್ರವಾಸ-ಧರ್ಮದ ಸಮಸ್ಯೆಗಳೊಂದಿಗೆ, ಕ್ರಿಶ್ಚಿಯನ್ ಆಗಲೇಬೇಕೆನ್ನುವ ಒತ್ತಡಗಳೊಂದಿಗೆ ಹೆಣೆದುಕೊಳ್ಳತೊಡಗಿದಾಗ ಹಿಂದೂವಾಗಿಯೇ ಉಳಿಯುವ ನಿರ್ಧಾರ ಕೈಗೊಳ್ಳುತ್ತಾನೆ.

ಇಂತಹ ಧಾರ್ಮಿಕ ವೈರುಧ್ಯಗಳ ಅಡಿಯಲ್ಲಿಯೇ ಬಿ.ಇ. ಕಾರ್ಪೆಂಟರ್ ಎಂಬ ಅಮೇರಿಕಾದ ಮಹಿಳೆ ಆನಂದೀಬಾಯಿಯ ಶಿಕ್ಷಣಕ್ಕೆ ನೆರವಾಗುವ ಅಭಿಲಾಷೆ ವ್ಯಕ್ತಪಡಿಸುತ್ತಾಳೆ. ಈ ಅವಕಾಶ ಸಿಕ್ಕಾಗ ಗೋಪಾಲ್‌ರಾವ್ ಇದನ್ನು ಪೂರಕವಾಗಿ ಬಳಸಿಕೊಳ್ಳುತ್ತಾನೆ. ಇಬ್ಬರೂ ಅಮೇರಿಕಾಕ್ಕೆ ಹೋಗುವ ಅವಕಾಶ ದಕ್ಕದೇ ಇರುವಾಗ, ಎಲ್ಲಾ ಬಂಧುಗಳನ್ನು ಎದುರು ಹಾಕಿಕೊಂಡು ಆನಂದೀಬಾಯಿ ಒಬ್ಬಳನ್ನೇ ಅಮೇರಿಕಾಕ್ಕೆ ಕಳಿಸುತ್ತಾನೆ.

ಇಲ್ಲಿಂದ ಆನಂದೀಬಾಯಿಯ ಜೀವನ ಗೋಪಾಲ್‌ರಾವ್‌ನಿಂದ ಒಂದು ಪ್ರತ್ಯೇಕವಾದ ಅಸ್ತಿತ್ವವನ್ನು ಪಡೆದುಕೊಳ್ಳುತ್ತಾ ಹೋಗುತ್ತದೆ. ಅಲ್ಲಿಯವರೆಗೆ ಗೋಪಾಲರಾವ್ ಎಲ್ಲದಕ್ಕೂ ಆಕೆಯ ಬೆಂಗಾವಲಾಗಿ ಇರುತ್ತಿದ್ದ, ಗೋಪಾಲರಾವ್ ಹೇಳಿದಂತೆ ಎಲ್ಲಾ ನಡೆಯುತ್ತಿದ್ದವು. ಆನಂದೀಬಾಯಿಗೆ ಆತನ ಸುಭದ್ರ ಕೋಟೆ ಒಡೆಯಲು ಸಾಧ್ಯವಾಗುವುದೇ ಅಮೇರಿಕಾಕ್ಕೆ ಏಕಾಂತವಾಗಿ ತೆರಳಿದ ಮೇಲೆ. ಮಿಸೆಸ್ ಕಾರ್ಪೆಂಟರ್ ಆಕೆಯ ಪೋಷಕರಾಗಿ ನಿಲ್ಲುತ್ತಾರೆ. ಆಕೆಗೆ ಬೇಕಾದ ಎಲ್ಲಾ ಅನುಕೂಲಗಳನ್ನು ಮಾಡಿಕೊಡುತ್ತಾರೆ. ವೇಷ ಭೂಷಣಗಳಿಂದ ಹಿಡಿದು ನಡೆ-ನುಡಿಯಲ್ಲಿ ಆನಂದೀಬಾಯಿ ಭಾರತದ ಸಂಸ್ಕೃತಿಯನ್ನು ಪಾಲಿಸಲು ಪ್ರಯತ್ನಿಸುತ್ತಾಳೆ, ಮಹಾಭಾರತದ ಕತೆಯನ್ನು ನೆನಪಿಕೊಂಡು ತನ್ನ ಹಾಗೂ ಗೋಪಾಲ್‌ರಾವ್ ಸಂಬಂಧವನ್ನು ವ್ಯಾಖ್ಯಾನಿಸಲು ಪ್ರಯತ್ನಿಸುತ್ತಾಳೆ. ಬರಿಯ ಸಸ್ಯಾಹಾರದ ಪದಾರ್ಥಗಳನ್ನು ತಿಂದುಕೊಂಡು ಒಟ್ಟಾಗಿ ತನ್ನ ಅಸ್ತಿತ್ವವನ್ನು ಅಮೇರಿಕಾದಲ್ಲಿ ಉಳಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಒಂದು ಸಂದರ್ಭದಲ್ಲಿ ಮಿಸೆಸ್ ಕಾರ್ಪೆಂಟರ್ ಕುಟುಂಬದ ಜೊತೆ ಪಿಕನಿಕ್ ಹೋದಾಗ-ಮಿಸೆಸ್ ಕಾರ್ಪೆಂಟರ್ ಮಗಳು ಆನಂದಬಾಯಿ ನಗುವಂತೆ ಮಾಡಿ ಫೋಟೋ ಒಂದನ್ನು ತೆಗೆಯುತ್ತಾಳೆ. ಆ ಫೋಟೋದಲ್ಲಿ ಆಕೆಯ ಸೀರೆಯ ಅಂಚು ಗಾಳಿಗೆ ಹಾರುವ ರೀತಿ ಕಾಣಬರುತ್ತದೆ. ಆ ಫೋಟೋ ಗೋಪಾಲ್‌ರಾವ್‌ಗೆ ಕಳಿಸಿದಾಗ–ಅವನ ಕಾಗದ ಆಕೆಯಲ್ಲಿ ದಿಗ್ಭ್ರಮೆ ಹುಟ್ಟಿಸುತ್ತದೆ. ಆಕೆ ಯಾರನ್ನು ನೋಡಿ ನಗುತ್ತಿದ್ದಳು ? ಆಕೆ ನೋಡಿ ನಗುತ್ತಿದ್ದ ಗಂಡಸಿನ ಹೆಸರು ಏನು ? ಆಕೆಯ ಉಡುಪಿನಲ್ಲಿ ಬದಲಾವಣೆಯಾಗಿ ಬಿಟ್ಟಿದೆ, ಆಕೆಯ ಸೆರಗು ಆಕೆಯ ಎದೆಯ ಭಾಗವನ್ನ ಸರಿಯಾಗಿ ಮುಚ್ಚಿರಲಿಲ್ಲ ? ಇಂತಹ ಕಾಗದ ಆನಂದೀಬಾಯಿಯನ್ನು ಪೂರ್ತವಾಗಿ ಭೂಮಿಗೆ ಇಳಿಸಿಬಿಡುತ್ತದೆ. ಕ್ರಮೇಣವಾಗಿ ತನ್ನ ಹಾಗೂ ಆತನ ನಡುವೆ ದೈಹಿಕವಾದ ಅಂತರ ಮಾತ್ರವಲ್ಲ ಮಾನಸಿಕವಾದ ಅಂತರವೂ ಅಗಾಧವಾಗಿ ಬೆಳೆಯತೊಡಗಿದೆ ಎಂಬುದನ್ನು ಆನಂದೀಬಾಯಿ ನಿಧಾನವಾಗಿ ಅರಿಯತೊಡಗುತ್ತಾಳೆ.

ಫಿಲಿಡಿಲ್ಫಿಯಾದಲ್ಲಿ ಮೆಡಿಕಲ್ ಕಾಲೇಜ್‌ಗೆ ಸೇರುವ ಆನಂದೀಬಾಯಿ ಅಲ್ಲಿಯೇ ಒಂದು ಕೊಠಡಿಯನ್ನು

ಬಾಡಿಗೆಗೆ ತೆಗೆದುಕೊಳ್ಳುತ್ತಾಳೆ. ಸಾವಿರಾರು ಮೈಲಿ ದೂರದ ಊರಿನಲ್ಲಿ ಕುಳಿತು 9 ವರ್ಷದ ತನ್ನ ಮದುವೆಯ ಬಗ್ಗೆ, ತನ್ನ ಅಜ್ಜಿ, ತಂದೆ-ತಾಯಂದಿರ ಬಗ್ಗೆ, ಗೋಪಾಲರಾವ್ ಬಗ್ಗೆ ಯೋಚಿಸುತ್ತಾ ಹೋಗುತ್ತಾಳೆ. ಎಷ್ಟೊಂದು. ಅಜಗಜಾಂತರ ಸಂಸ್ಕೃತಿಗಳು ಎನಿಸುತ್ತದೆ. ಅಮೇರಿಕಾದ ಹುಡುಗಿಯರು/ಹುಡುಗರು ಸುತ್ತುವುದನು ಕಂಡಾಗ ಹದಿನೇಳು ವರುಷದ ಆನಂದೀಬಾಯಿಗೆ ಆಕೆ ಹಾಗೂ ಗೋಪಾಲ್‌ರಾವ ಮಧ್ಯದ ಅಂತರದ ನೆನಪಾಗುತ್ತದೆ.

ಹೊಗೆಯೆಲ್ಲಾ ತುಂಬಿಕೊಂಡುಬಿಡುವ ಕೊಠಡಿಯಲ್ಲಿಯೇ ಮಾನಸಿಕ ಸ್ಥೈರ್ಯ-ದೇಹಕ್ಕೆ ಶಕ್ತಿ ತುಂಬುತ್ತದೆ ಎನ್ನುವ ಆನಂದೀಬಾಯಿ ನಿಧಾನವಾಗಿ ತನ್ನ ದೇಹದ ಶಕ್ತಿಯನ್ನು ಕಳೆದುಕೊಳ್ಳುತ್ತಾ ಹೋಗುತ್ತಾಳೆ. ಆಕೆಯ ನರಗಳೆಲ್ಲಾ ಕಪ್ಪೆ ಚಿಪ್ಪಿನತರಹ ಒಡೆದ ರೀತಿ ಭಾಸವಾಗುತ್ತಾ ಹೋಗುತ್ತದೆ. ಇಂತಹ ಭಯಂಕರ ಕಾಯಿಲೆಯ ನಡುವೆಯೇ ಆಕೆ ತಾನು ಡಾಕ್ಟರ್ ಆಗಬೇಕೆಂಬ ಮಹಾತ್ವಾಕಾಂಕ್ಷೆಗಾಗಿ ಓದುತ್ತಲೇ ಹೋಗುತ್ತಾಳೆ. ಎಡಬಿಡದೇ ಓದುವುದು, ಊಟ

ಈ ಭೂಮಿಯ ಮೇಲೆ ದೇವರ ಅದ್ಭುತ ಕೃಪೆಯೆಂದರೆ ಸ್ತ್ರೀಯರು. ಸ್ತ್ರೀಯರು ನಮ್ಮ ದೇಶದ ಉರಿಯುವ ಜ್ಯೋತಿಗಳು. ಆನಂದಿ ಗೋಪಾಲ್ ಸಹ ಅಂತಹ ಸ್ತ್ರೀಯರಲ್ಲಿ ಒಬ್ಬಳು. ಆಕೆಯ ವಿದ್ಯಾಭ್ಯಾಸದ ಮಹತ್ವವಾದ ಸಾಧನೆಯನ್ನು ಕುರಿತು ನನ್ನ ಸರಳ ಮಾತುಗಳಲ್ಲಿ ಬರೆಯುತ್ತಿದ್ದೇನೆ.

ವಿದ್ಯಾಭ್ಯಾಸ ಮಹಿಳೆಯರಿಗೆ ಇಂದು ಸುಲಭವಾದ ಹಾಗೆ ಹಿಂದೆ ಇರಲಿಲ್ಲ. ಸ್ತ್ರೀಯರು ಅಕ್ಷರವನ್ನು ಕಲಿಯುವುದು ಒಂದು ದೊಡ್ಡ ಸಾಧನೆಯೇ ಆಗಿತ್ತು. ಮಹಿಳೆಯರು ವಿದ್ಯಾವಂತೆಯಾಗುವುದರ ಅರ್ಥ ತಿಳಿಯುವ ಅವಕಾಶ ಅವರಿಗೆ ಇರಲಿಲ್ಲ, ಸ್ತ್ರೀಯರು ಪ್ರಾಥಮಿಕ ಹಂತದ ವಿದ್ಯಾಭ್ಯಾಸದಿಂದ ವಂಚಿತರಾಗಿದ್ದರು. ಒಂದು ಪಕ್ಷ ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸಿದ ಪಕ್ಷದಲ್ಲಿ ಆಕೆಯ ತಂದೆ-ತಾಯಿ ತಪ್ಪು ಮಾಡಿದ ನಿಂದನೆಗೆ ಒಳಗಾಗಬೇಕಾಗಿತ್ತು.

ಆನಂದಿಗೋಪಾಲರವರ ತಂದೆ-ತಾಯಿ ಅವಳನ್ನು ವಿದ್ಯಾವಂತೆಯನ್ನಾಗಿ ಮಾಡಿದ್ದಕ್ಕಾಗಿ ಇಂತಹದೇ ಶಿಕ್ಷೆಗೆ - ಗುರಿಯಾಗಬೇಕಾಯಿತು. ಸಂಪ್ರದಾಯಿಕ ಬ್ರಾಹ್ಮಣ ಕುಟುಂಬದಲ್ಲಿ ಬೆಳೆದ ಆನಂದಿ ಪುಸ್ತಕ ಮುಟ್ಟುವ ರೋಮಾಂಚನ ಅನುಭವವನ್ನು ಕನಸಿನಲ್ಲಿಯೂ ಕಾಣುವ ಅವಕಾಶವನ್ನೂ ಹೊಂದಿರಲಿಲ್ಲ. ಅವಳ ಮದುವೆಯಾದ ನಂತರ ಅವಳ ಗಂಡ ಅವಳ ಜೀವನಕ್ಕೆ ವಿಭಿನ್ನವಾದ ತಿರುವನ್ನು ನೀಡಿದ. ಅವನು ಅವಳ ಗುರುವಾಗಿದ್ದು ಅವಳ ಓದುವ ಹಸಿವೆಗೆ ನೀರೆರೆದ. ಮೊಟ್ಟಮೊದಲ ಬಾರಿಗೆ ಅವಳ ತಲೆಯಲ್ಲಿ ವಿದ್ಯಾಭ್ಯಾಸದ ಗುಂಗನ್ನು ಹುಟ್ಟಿಸಿದ. ಅವಳಲ್ಲಿದ್ದ ಆತ್ಮವಿಶ್ವಾಸ ನಂಬಿಕೆಗಳೇ ತೊಡಕುಗಳನ್ನೆಲ್ಲಾ ಎದುರಿಸಿ ಅವಳ ಕನಸುಗಳು ನನಸಾಗುವಂತೆ ಮಾಡಿದವು. ಆನಂದಿ ಗೋಪಾಲ ಭಾರತದ ಪ್ರಥಮ ಮಹಿಳಾ ವೈದ್ಯೆಯಾಗಿ ರೂಪುಗೊಂಡಳು. ಇದು ಅವಳ ಮಹತ್ವವಾದ ಸಾಧನೆಯೇ ಸರಿ. ಅಮೇರಿಕಾಗೆ ಹೋದ ಆನಂದಿಗೋಪಾಲ ಇತರರಂತೆ ಭಾರತೀಯಳೆಂದು ಪರಿತಪಿಸಲಿಲ್ಲ. ಅಮೇರಿಕಾಕ್ಕೆ ಹೋಗುವುದು ಸುಲಭವಾದರೂ ಭಾರತೀಯರಾಗಿ ಹಿಂದಿರುಗುವುದು ಕಷ್ಟಸಾಧ್ಯ. ಜೀವನದಲ್ಲಿ ಸಾಧನೆಯ ಛಲ, ಜ್ಞಾನಾರ್ಜನೆ ಹಾಗೂ ಸ್ವಾತಂತ್ರದ ಬೀಜವನ್ನು ಭಾರತೀಯ ಮಹಿಳೆಯರಿಗೆ ಬಿತ್ತಿ ಮಾರ್ಗದರ್ಶಕಳಾದಳು. ಈ ಮಹತ್ವಾಕಾಂಕ್ಷೆಯ ಮಹಿಳೆಯ ಮೆಚ್ಚುಗೆಗೆ ನನ್ನ ಈ ಮಾತುಗಳು ಅಪೂರ್ಣವಾದವು.

—**ಎನ್. ಆರ್. ಪ್ರಿಯ,** ದ್ವಿತೀಯ ಪಿ.ಯು.ಸಿ.

ಆದರೂ ಮಿಸೆಸ್ ಕಾರ್ಪೆಂಟರ್ ಜೊತೆಗೆ ಆಕೆ ತಾತ್ವಿಕವಾಗಿಯೇ ಮಾತನಾಡುತ್ತಾಳೆ. ಆಕೆಯ ಮಾತು ಅವರಿಗೆ ನಿಗೂಢವಾಗುತ್ತವೆ. ಪ್ರೀತಿ, ಆತ್ಮ, ದೇಹದ ಬಗ್ಗೆ ಮಾತನಾಡುತ್ತಾ ಆತ್ಮಕ್ಕೆ ಚಳಿ, ಗಾಳಿಯಾಗುವುದಿಲ್ಲ ಎನ್ನುತ್ತಾಳೆ. ಆತ್ಮಕ್ಕೆ ಬೇರೆ ಅಸ್ತಿತ್ವವಿದೆ ಎನ್ನುತ್ತಾಳೆ. ಬೆಚ್ಚನೆಯ ಉಡುಪು ಧರಿಸದೇ, ಕೊಠಡಿಯಲ್ಲಿ ಬೆಂಕಿ ಕಾಯಿಸುವ ಸ್ಥಳ ಸರಿಯಾಗಿರದೇ

ಸರಿಯಾಗಿರದ, ದೇಹ ಬೆಚ್ಚಗಿರದ ಕೊಠಡಿ, ನಿರಂತರವಾಗಿ ಎದೆ ಹೊಕ್ಕ ಹೊಗೆ ಆನಂದೀಬಾಯಿಯ ದೇಹದ ಶಕ್ತಿಯನ್ನು ಕ್ರಮೇಣವಾಗಿ ಕುಗ್ಗಿಸಿಬಿಡತೊಡಗುತ್ತದೆ. ಈ ನಡುವೆ ಗೋಪಾಲ್‌ರಾವ್ ವಿಚಿತ್ರವಾಗಿ ಪತ್ರಗಳನ್ನು ಬರೆಯತೊಡಗಿ ಆಕೆಯ ದೈಹಿಕ ಹಿಂಸೆಯ ಜೊತೆಗೆ ಮಾನಸಿಕ ಹಿಂಸೆಯು ಹೆಚ್ಚಾಗತೊಡಗುತ್ತದೆ. 'ನೀನು ಮಾಂಸ ತಿಂದರೆ, ಬಿಳಿಯ ಹೆಂಗಸರ ತರಹ

ಉಡುಪು ಧರಿಸಿದರೆ ಪರವಾಗಿಲ್ಲ' ಎಂದು ಆತ ಕಾಗದ ಬರೆಯುವ ಅರ್ಥ ಆಕೆಗೆ ಮಾತ್ರ ಗೊತ್ತು. ಆದರೆ ಆತ ನಿಜವಾಗಿ ಬಯಸುವುದೆಂದರೆ ಆಕೆ ಈ ಯಾವುವನ್ನೂ ಮಾಡಬಾರದು. ಬಿಳಿಯರ ಸಂಸ್ಕೃತಿಗೆ ಗೋಪಾಲ್ ರಾವ್‌ಗಿಂತ ಮುಂಚೆ expose ಆದ ಆಕೆ ಬೇಳೆ ಅನ್ನ ತಿನ್ನುವುದು, ಸೀರೆ ಉಡುವುದು, ತನ್ನ ಪತಿಯೇ ಆರಾಧ್ಯ ದೈವ ಎಂದು ಭಾವಿಸಿ ಆ ರೀತಿಯೇ ನಡೆದುಕೊಳ್ಳುವುದೇ ಆತನಿಗೆ ಇಷ್ಟ. ಆಕೆ ಡಾಕ್ಟರ್ ಆಗಬೇಕು, ಹಿಂದೂ ಗಂಡಸರು ಊಹಿಸಲೂ ಆಗದಂತಹ ಜ್ಞಾನವನ್ನು ಆಕೆ ಸಂಪಾದಿಸಬೇಕು ಎನ್ನುವಲ್ಲಿ ಗೋಪಾಲ್‌ರಾವ್‌ಗೆ ತನ್ನ ವ್ಯಕ್ತಿತ್ವದಲ್ಲಿ ಹಿರಿಮೆಯನ್ನು ಕಾಯ್ದುಕೊಳ್ಳುವುದಷ್ಟೇ ಮುಖ್ಯವಾಗಿತ್ತೇನೋ ಎನ್ನುವ ಅನುಮಾನ ಬರುವುದು ಇಲ್ಲಿಯೇ. ಆಕೆ ಅಮೇರಿಕಾದಲ್ಲಿ ಒಂಟಿಯಾಗಿದ್ದು ಡಾಕ್ಟರ್ ಆಗಲು ಪ್ರಯತ್ನಿಸಿದಾಗ ಅವನಲ್ಲಿರುವ ಕೀಳರಿಮೆಗಳು ಜಾಗೃತವಾಗುತ್ತವೆ. ತಾನು ಆಕೆಯ ಮೇಲೆ ಹೊಂದಿದ್ದ ಹಿಡಿತ ಸಡಿಲವಾಗಿ ಹೋಗಿದೆ. ಇನ್ನು ಆನಂದೀಬಾಯಿ ತನ್ನ ಸಮ್ಮೋಹನಾಸ್ತ್ರದಿಂದ ದೂರವಾದ ಹೆಂಗಸು, ಹೆಂಡತಿ ಎನ್ನುವ ಭಾವನೆ ಭಾರತದಲ್ಲಿ ಒಂಟಿಯಾಗಿರುವ ಆತನಲ್ಲಿ ಜಾಗೃತವಾಗುತ್ತದೆ, ಹೀಗಾದಾಗ ಮತ್ತೆ ವಿಚಿತ್ರವಾದ ನಡತೆಗಳು ಅವನಲ್ಲಿ ಕಂಡು ಬರುತ್ತವೆ.

ಅಮೇರಿಕಾಕ್ಕೆ ಸನ್ಯಾಸಿಯ ವೇಷದಲ್ಲಿ ಈತ ಬರುತ್ತಾನೆ. ಭಾರತೀಯ ಸಂಪ್ರದಾಯ ಸಂಸ್ಕೃತಿ–ಆತನನ್ನು ಅಪಹಾಸ್ಯ ಮಾಡಿದಾಗ ಕ್ರಿಶ್ಚಿಯನ್ ಆಗುತ್ತೇನೆ ಎಂದು ಹೆದರಿಸಿ, ಕ್ರಿಶ್ಚಿಯಾನಿಟಿಯ ಉದಾರತೆಯನ್ನು ಎತ್ತಿ ಹಿಡಿಯುತ್ತಿದ್ದವನು ಗೋಪಾಲ್ ರಾವ್. ತನ್ನ ಹೆಂಡತಿಯನ್ನು ಓದಲು ಬಿಡದ ಈ ಸಂಸ್ಕೃತಿ ನಾಶಕಾರಕವಾಗಿ ಕಂಡಿತ್ತು ಆತನಿಗೆ. ಆದರೆ ಹೆಂಡತಿಯನ್ನು ವಿದ್ಯಾಭ್ಯಾಸಕ್ಕೆ ಕಳಿಸಲಿಕ್ಕಾಗಿಯೇ ಕ್ರಿಶ್ಚಿಯನ್ ಆಗಲೂ ಒಪ್ಪದಾತ ಈತ ಹೆಂಡತಿ ಅಮೇರಿಕಾದಲ್ಲಿ ಒಬ್ಬಳೇ ಓದುತ್ತಿದ್ದಾಳೆ ಎನ್ನುವ ಹಂತದಲ್ಲಿ, ತನ್ನ ಸಮ್ಮೋಹನಾಸ್ತ್ರದಿಂದ ದೂರವಾಗುತ್ತಿದ್ದಾಳೆ ಎನ್ನುವ ಹಂತದಲ್ಲಿ ಭಾರತೀಯ ಸಂಸ್ಕೃತಿಯನ್ನು ಎತ್ತಿ ಹಿಡಿಯುವುದೇ ತನ್ನ ಆದ್ಯ ಕರ್ತವ್ಯ ಎಂದು ಬಗೆಯುತ್ತಾನೆ. ಸನ್ಯಾಸಿಯ ವೇಷದಲ್ಲಿದ್ದುಕೊಂಡು ಅಮೇರಿಕಾದಲ್ಲಿ ಭಾರತೀಯ ಸಂಸ್ಕೃತಿಯ ಹಿರಿಮೆಯ ಬಗ್ಗೆ ಮಾತನಾಡುತ್ತಾ ಹೋಗುತ್ತಾನೆ.

ಆನಂದೀಬಾಯಿಗೆ ತನ್ನ ಗಂಡನ ಪೊಳ್ಳುತನಗಳು ಅರ್ಥವಾಗುವುದು ಇಲ್ಲಿಯೇ. ತಾತ್ವಿಕವಾಗಿ ಸರಿಯಾದ ನೆಲೆಯಿಲ್ಲದ ಗೋಪಾಲರಾವ್ ತಾನು ಹೇಳಿದುದನ್ನು ಒಪ್ಪಿಕೊಳ್ಳದ ಸಮಾಜದ ಎದುರು ವಿಚಿತ್ರವಾಗಿ ವರ್ತಿಸುವ ಸ್ವಭಾವದವನು ಎಂಬುದು ಆಕೆಯ ಗ್ರಹಿಕೆಗೆ ಬರತೊಡಗುತ್ತದೆ.

ಪಂಡಿತ ರಮಾಬಾಯಿ–ಆನಂದೀಬಾಯಿಯು 'ಡಾಕ್ಟರ್' ಆಗಿ ಡಿಗ್ರಿ ಪಡೆಯುವ ಸಂದರ್ಭದಲ್ಲಿ ಅಮೇರಿಕಾಕ್ಕೆ ಬರುವಂತೆ ಒತ್ತಾಯಿಸುವವನೂ ಗೋಪಾಲ್‌ರಾವ್. ಡಾಕ್ಟರ್ ಆಗುವ ಸಮಯಕ್ಕಾಗಲೇ ಆನಂದೀಬಾಯಿ ತನ್ನ ಪೂರ್ಣ ದೈಹಿಕ ಬಲವನ್ನು ಕಳೆದುಕೊಳ್ಳುತ್ತಾಳೆ. ಆಕೆಯ ಜೀವನದಲ್ಲಿ ಆಕೆ ವೈದ್ಯೆಯಾಗಿ ಉಪಚರಿಸಿದ್ದೆಂದರೆ ಪಂಡಿತ್ ರಮಾಬಾಯಿ ಮಗಳನ್ನು ಮಾತ್ರ. ಜ್ವರ ಹಿಡಿದು ಮಲಗಿದ ಮಗುವನ್ನು ಉಳಿಸಿದಾಗ ಆನಂದೀಬಾಯಿಗೆ ಜೀವನದ ಸಾರ್ಥಕತೆಯ ಅರ್ಥವಾಗುತ್ತದೆ.

'ಡಾಕ್ಟರ್' ಆಗಿ ವಾಪಸ್ಸು ಬರುವ ಆನಂದೀಬಾಯಿಗೆ ಟಿ.ಬಿ. ಮತ್ತೆ ಸಂಬಂಧಿಕರುಗಳ ಕಟು-ಟೀಕೆಗೆ ಗಂಡ-ಹೆಂಡತಿ ಇಬ್ಬರೂ ಒಳಗಾಗುತ್ತಾರೆ. ಹೆಂಗಸರು ಓದುವುದೇ ಪಾಪ, ಅಂತಹದುರಲ್ಲಿ ಜಾತಿ, ಕುಲ, ಭಾಷೆಯಿಲ್ಲದ ಪರದೇಶಕ್ಕೇ ಹೋಗಿದ್ದರಿಂದಲೇ ಆನಂದೀಬಾಯಿಗೆ ಈ ಭಯಂಕರ ಕಾಯಿಲೆ ಅಂಟಿಕೊಂಡಿತು ಎನ್ನುವ ಕುಹಕ ನುಡಿಗಳ ಮಧ್ಯೆಯೇ ಆನಂದೀಬಾಯಿ ಜೀವನ್ಮರಣಗಳ ಮಧ್ಯೆ ಹೋರಾಡುತ್ತಾಳೆ. ಆನಂದೀಬಾಯಿಯ ಕೊನೆಯ ಘಳಿಗೆಯಲ್ಲಂತೂ ಗೋಪಾಲ್ ರಾವ್ ಆಕೆಯ ಬಳಿಯೇ ಸುಳಿಯುವುದಿಲ್ಲ. ಕ್ರಿಶ್ಚಿಯನ್ ಆಗಿ ಪರಿವರ್ತನೆ ಆಗಿ ಆಕೆಯ ಮರಣದ ಸಂದರ್ಭದಲ್ಲಿ ಆತ ಬರುತ್ತಾನೆ. ಈತನ ವಿಚಿತ್ರ ವರ್ತನೆಗಳ ನೆಲೆ ಆನಂದೀಬಾಯಿಗೆ ಅರ್ಥವಾಗುತ್ತದೆ. ಆತನ ಬಗ್ಗೆ ಆಕೆಗೆ ಸಿಟ್ಟು ಬರುವ ಬದಲು ಕರುಣೆ ಉಕ್ಕುತ್ತದೆ.

'ಆನಂದೀಬಾಯಿ'–ಕಾದಂಬರಿ ಹೀಗೆ ಹಲವಾರು ಹರವುಗಳನ್ನು ನಮ್ಮ ಮುಂದೆ ಬಿಚ್ಚಿಡುತ್ತದೆ. ಹೆಣ್ಣಿನ ಶಿಕ್ಷಣದ ಪ್ರಶ್ನೆಗಳನ್ನು ಹಿಂದೂಧರ್ಮ, ಕ್ರಿಶ್ಚಿಯಾನಿಟಿ, ವಸಾಹತುಶಾಹಿಯ ಸಂದರ್ಭದಲ್ಲಿ ಬಿಚ್ಚಿ ಇಡುತ್ತದೆ. ಉದಾರವಾದಿಯಾಗಬಯಸುವ ಗಂಡಸಿನ ಮನಸ್ಸಿನ ದೌರ್ಬಲ್ಯ-ಹಿರಿಮೆಯ ವೈರುಧ್ಯಗಳನ್ನು ಗೋಪಾಲ್ ರಾವ್ ವ್ಯಕ್ತಿತ್ವದಲ್ಲಿ ನಮ್ಮ ಮುಂದೆ ಬಿಚ್ಚಿ ಇಡುತ್ತದೆ.

# ಜನಪದ ಸಾಹಿತ್ಯದಲ್ಲಿ ಸ್ತ್ರೀ ಚಿತ್ರಣ

ಜನಪದ ಸಾಹಿತ್ಯಕ್ಕೆ ಕರ್ತೃ ಯಾರು ಎಂದು ಹೇಳುವುದು ಕಷ್ಟ. ಇದು ವಾಕ್ ಪರಂಪರೆಯ ಮೂಲಕ ಜನರಲ್ಲಿ ಪ್ರಸರಣಗೊಳ್ಳುತ್ತದೆ. ಹಾಡಿಗೆ ಚೌಕಟ್ಟು ಪರಂಪರೆಯಿಂದ ಹರಿದು ಬಂದರೂ ಅದರೊಳಗಿನ ವಿವರಗಳು ಆಯಾ ಕಾಲದ ಸ್ಥಿತಿಗಳನ್ನು ಒಳಗೊಂಡಿರುತ್ತವೆ. ಇದನ್ನು ಒಂದೇ ವಸ್ತು ಉಳ್ಳ ವಿವಿಧ ರೀತಿಯ ಪಾಠಾಂತರಗಳಿಂದ ತಿಳಿಯಬಹುದು. ವಿವಿಧ ಪಾಠಾಂತರಗಳಿಗೆ ಪ್ರಾದೇಶಿಕ ಬೇಧ, ಭಿನ್ನವಾಗಿ ಆಲೋಚಿಸುವ ರೀತಿಗಳೂ ಕಾರಣವಾಗಿರುತ್ತವೆ. ಪ್ರತಿ ಪಾಠವನ್ನೂ ಸ್ವತಂತ್ರ ಪಾಠವೆಂದು ಪರಿಗಣಿಸಿ ಅದನ್ನು ಹಾಡಿದವರನ್ನು ಕರ್ತೃವೆಂದು ತಿಳಿದು ಅಧ್ಯಯನ ಮಾಡಿದರೆ, ಜನಪದ ಸಾಹಿತ್ಯದ ಬಹುಭಾಗದ ಸಾಹಿತ್ಯ ಸ್ತ್ರೀ ಸಂವೇದನೆಯನ್ನು ಉಳ್ಳದ್ದೇ ಆಗಿದೆ. ಯಾಕೆಂದರೆ ಜನಪದ ಸಾಹಿತ್ಯದಲ್ಲಿ ಹೆಚ್ಚಾಗಿ ಹೆಣ್ಣಿನ ನೋವಿನ, ಬಲಿಯ ಕತೆಯೇ ವಸ್ತುವಾಗಿರುವುದು ಕಾಣುತ್ತದೆ. ಅದನ್ನು ಹೆಣ್ಣು ಮಕ್ಕಳು ಧ್ವನಿಕೊಟ್ಟು ಹಾಡಿದ್ದಾರೆ. ಮನಬಿಚ್ಚಿ ನೋವಿಗೆ ತೆರೆದುಕೊಂಡಿದ್ದಾರೆ.

ಹಾಡುಗಾರತಿಯರು ಹೆಣ್ಣಿನ ನೋವನ್ನು ವರ್ಣಿಸುವ ಸಂದರ್ಭದಲ್ಲಿ ತಮಗೆ ಅರಿವಿಲ್ಲದೆಯೇ ಕತೆಗೆ ಪ್ರತಿಕ್ರಿಯಿಸುತ್ತಿರುತ್ತಾರೆ. ಅವರ ಪ್ರತಿಕ್ರಿಯೆ ಹಾಡಿನ ಬಗ್ಗೆ ಅವರಿಗಿರುವ ನಿಲುವನ್ನು ಸ್ಪಷ್ಟಪಡಿಸುತ್ತದೆ. ಕತೆಯಲ್ಲಿ ಹೆಣ್ಣಿನ ನೋವನ್ನು ವರ್ಣಿಸುವಾಗ ಅವರು ಅಳುವುದು, ಆವೇಶಕ್ಕೆ ಒಳಗಾಗುವುದು, ಹಾಡಲ್ಲಿ ಬೈಗಳಗಳನ್ನು ಬಳಸುವುದು ಮುಂತಾದವು ಅವರು ಆ ನೋವಿಗೆ ನೀಡುವ ಪ್ರತಿಕ್ರಿಯೆಗಳು. ಇದರಿಂದಾಗಿ ಈ ರೀತಿಯ ಪ್ರತಿಕ್ರಿಯೆಗಳನ್ನು ಹೆಣ್ಣು ಮಕ್ಕಳು ಅಸಹಾಯಕ ನೆಲೆಯಲ್ಲಿ ಇರುವಾಗ ಪ್ರದರ್ಶಿಸುತ್ತಿರುತ್ತಾರೆ. ಇವೇ ಅವರು ನೀಡುವ ಅಥವಾ ಪರೋಕ್ಷವಾಗಿ ಸೂಚಿಸುವ ಪ್ರತಿಭಟನೆಗಳೆಂದು ನಾವು ತಿಳಿಯಬೇಕಾಗುತ್ತದೆ.

ಜನಪದ ಸಮಾಜದಲ್ಲಿ ಬದುಕು ವೈಯಕ್ತಿಕ ನೆಲೆಯಲ್ಲಿ ನಿಲ್ಲದೆ ಪ್ರತಿಯೊಂದೂ ಸ್ಥಿರವು ಸಾಮಾಜಿಕ ನೆಲೆಯಲ್ಲಿಯೇ ನಿರ್ಧಾರವಾಗುತ್ತಿರುತ್ತದೆ. ಇದರಿಂದಾಗಿ ವೈಯಕ್ತಿಕವಾದ ಹಲವು ರೀತಿ-ನೀತಿಗಳು ಸಾಮಾಜಿಕ ನಿಯಮಗಳಿಂದ ನಿಯಂತ್ರಣಕ್ಕೆ ಒಳಗಾಗುತ್ತವೆ. ಹೆಣ್ಣಿನ ಜೀವನದ ವೈಯಕ್ತಿಕ ಗಳಿಗೆಗಳಾದ ಮದುವೆ, ಸೋಬಾನ, ತಾಯಿತನ ಮುಂತಾದವು ಜೀವನದ ಮೌಲ್ಯಗಳಾಗಿ ಸಾರ್ವತ್ರಿಕಗೊಳ್ಳುತ್ತವೆ. ಇದರಿಂದಾಗಿ ಅವಳ ಶೀಲ, ಬಂಜೆತನ ಮುಂತಾದವು ಎಲ್ಲರು ಮಾತಾಡಿಕೊಳ್ಳುವ ಘನತೆಯ ವಿಚಾರಗಳಾಗುತ್ತವೆ. ಅಂತಹ ವಿಚಾರಗಳ ಮೂಲಕವೇ ಆಕೆಯ ಶ್ರೇಷ್ಠತೆಯನ್ನು ವಿವರಿಸುತ್ತಾರೆ. ಇಂತಹ ಮಿತಿಗಳಿಂದಾಗಿ ಹೆಣ್ಣು ಹುಟ್ಟಿನಿಂದಲೇ ಅನಾದರಕ್ಕೆ ಒಳಗಾಗುತ್ತಾಳೆ. ಹೆಣ್ಣು ಹುಟ್ಟಿದ ಒಂದು ಕುಟುಂಬವೇ ಆತಂಕಕ್ಕೆ ಒಳಗಾಗುವುದುಂಟು. ಮಗುವೊಂದರ ಹುಟ್ಟು ಸಂತೋಷವೆಂದು ವೈಭವೀಕರಿಸಿದರೂ, ಹೆಣ್ಣು ಹಡೆದಾಗ ಆತಂಕಕ್ಕೆ ಗುರಿಯಾಗುವ ಹೆಣ್ಣೊಬ್ಬಳ ಸ್ಥಿತಿಯನ್ನು ಹೀಗೆ ವ್ಯಕ್ತಪಡಿಸಿದ್ದಾರೆ :

> ಹೆಣ್ಣು ಹುಟ್ಯಾದಂತ ಹೇಳಿ ಕಳುವಲಿಬ್ಯಾಡ
> ಹೆಣ್ಣೆಂದರವರು ಹೆದರ್‍ಯಾರು ಕಂದವ್ವ
> ಹೆಣ್ಣಲ್ಲ ನಮಗ ರವಿಚಿನ್ನ [ಪು. 91, ಗರತಿಹಾಡು]

ಇಂತಹ ಆತಂಕದಲ್ಲಿ ಹುಟ್ಟಿದ ಹೆಣ್ಣುಮಗಳನ್ನು ಬೆಳಸುವುದೇ 'ನೆರಮನೆಯ ಸಿರಿದೇವಿ'ಯಾಗಲು. ಇದರಿಂದಾಗಿ ಅವಳು ಅತ್ತೆ ಮನೆಯಲ್ಲಿ ಬಾಳುವೆ ಮಾಡಲು ತವರಲ್ಲಿಯೇ ಸಿದ್ಧಳಾಗಿ ಹೋಗಬೇಕು. ಅಲ್ಲಿ ಹುಟ್ಟಿದ ಮನೆಗೂ ಕೊಟ್ಟಮನೆಗೂ ಹೆಸರು ತರುವ ಗರತಿಯಾಗಿ ಬಾಳ್ವೆ ಮಾಡಬೇಕು. ಇದನ್ನು ಮಾಡುವ ಜವಾಬ್ದಾರಿಯು ತಾಯಿಯದೇ ಆಗಿರುತ್ತದೆ. ಪ್ರಧಾನ ಮೌಲ್ಯ ವ್ಯವಸ್ಥೆಗೆ ಅನುಗುಣವಾಗಿ ಬದುಕನ್ನು ರೂಪಿಸಿಕೊಳ್ಳುವುದು ಮತ್ತು ರೂಪಿಸುವುದು ಹೆಣ್ಣಿನ ಕೆಲಸವಾಗಿರುತ್ತದೆ. ಇದರ ಮುಂದುವರಿಕೆಗೆ ಮುಖ್ಯವಾಗಿ ಸ್ತ್ರೀಯರೇ ವಾಹಕರಾಗಿ ಕೆಲಸ ಮಾಡುತ್ತಿರುವುದನ್ನು ಗುರುತಿಸಬಹುದು. ತಾಯಿಯೇ ಮಗಳಿಗೆ ತಾಳ್ಮೆ, ತ್ಯಾಗ ಮುಂತಾದ ಗುಣಗಳಿಗೆ ಹೆಚ್ಚು ಲಕ್ಷ್ಯ ಕೊಡುವಂತೆ ಶಿಕ್ಷಣ ನೀಡುವ ಹೊರೆ ಹೊತ್ತಿರುತ್ತಾಳೆ ಮತ್ತು ಅದನ್ನು ಪಾಲಿಸುವಂತೆ ಒತ್ತಡವನ್ನು ಹೇರುತ್ತಾಳೆ.

ಹೆಣ್ಣುಮಕ್ಕಳ್ಹುಟ್ಟಿದರೆ ಹೆರವರಿಗೆ ಸೊಸೆಯಕ್ಕ
ಗಂಡು ಹುಟ್ಟಿದರ ಮನೆಗಾಗಿ । ಅಪ್ಪಯ್ಯ
ಎಲ್ಹೋದರೂ ನಿನ್ನ ಹೆಸರಾಗಿ
[ಪು: 105, ಗರತಿ ಹಾಡು]

ಗಂಡು ಮಗುವಿನ ಸ್ಥಾನ ಸಮಾಜದಲ್ಲಿ ಮೊದಲೇ ನಿರ್ಧಾರವಾಗಿರುತ್ತದೆ. ಆದರೆ ಹೆಣ್ಣು ಮಗಳಿಗೆ ಇಂತಹ ಭದ್ರತೆಯಿಲ್ಲ. ಆಕೆಯ ಪಾತ್ರ ನಿರ್ಧಾರ ತಂದೆ ಮೂಲಕವಾಗಿ ಮಾವ, ಗಂಡ ಇವರುಗಳು ನಿರ್ಧರಿಸುವವರಾಗಿರುತ್ತಾರೆ. ಇಂತಹ ಅಸ್ಥಿರತೆಯಲ್ಲಿ ಹೆತ್ತತಾಯಿಯೇ ಅವಳನ್ನು ನಿಯಮಗಳಿಗೆ ಬದ್ಧಳಾಗಿ ನಡೆಯುವಂತೆ ಒತ್ತಾಯಿಸಬೇಕಾಗಿರುತ್ತದೆ. ಇಲ್ಲದಿದ್ದರೆ ಮಗಳನ್ನು ಬೈಯುವುದರ ಜೊತೆಗೆ ತಾಯಿಪಾತ್ರವನ್ನು ಅವಹೇಳನ ಮಾಡಲಾಗುವುದು. 'ನೂಲಿನಂತೆ ಸ್ಯಾಲೆ ತಾಯಿಯಂತೆ ಮಗಳು" ಇಂತಹ ಗಾದೆಗಳು ತಾಯಿಯ ಜವಾಬ್ದಾರಿಯನ್ನು ತಿಳಿಸುತ್ತವೆ. ಗಾದೆಗಳು ಕಾನೂನುಗಳಂತೆ ಜನಪದ ಸಮಾಜದ ಕೆಲಸ ಮಾಡುತ್ತವೆ. ಅವು ಅವರ ನಿಯಮಗಳನ್ನು ಹೇಳುತ್ತವೆ.

ಅತ್ತೆಯ ಮನೆಯಾಗ ಮಾತಾಗಿ ಇರಬೇಕು
ಹೊತ್ತಾಗಿ ನೀಡಿದರ ಉಣಬೇಕು ತವರವರ
ಉತ್ತಮರ ಹೆಸರು ತರಬೇಕು [ಗರತಿಹಾಡು]

ಸೊಸೆಯಾಗಿ, ಮಗಳಾಗಿ ಎರಡು ಮನೆಯ ಗೌರವಗಳನ್ನು ಕಾಪಾಡಲು ಹೊಣೆ ಹೊರುವವಳಾಗಿರುತ್ತಾಳೆ. ಇಂತಹ ನಿಯಮಗಳನ್ನು ಮತ್ತಷ್ಟು ವಿವರವಾಗಿ ನೋಡಲು ಲಾವಣಿ, ಕಥನ ಗೀತೆಗಳನ್ನು ನೋಡಬಹುದು.

ಕೆರೆಗೆ ಹಾರವಾಗಿರುವ ಹೆಣ್ಣು ಮಕ್ಕಳನ್ನು ಕುರಿತ ಹಲವು ಲಾವಣಿಗಳು ಕಂಡುಬರುತ್ತವೆ. 'ಕೆರೆಗೆ ಹಾರ', 'ಒಡ್ಡರಬೋವಿ', 'ಕೆರಯ ಹೊನ್ನಮ್ಮ', 'ಮದಗದ ಕೆಂಚಮ್ಮ' ಹೀಗೆ ಅವುಗಳ ಪಾಠಗಳು ಹತ್ತಾರಿವೆ. ಇಲ್ಲಿನ 'ಕೆರೆಗೆ ಹಾರ' ಮತ್ತು 'ಮದಗದ ಕೆಂಚಮ್ಮ' ಇವು ಕೆಲವು ಸಂದರ್ಭದಲ್ಲಿ ಒಂದೇ ರೀತಿಯಾಗಿ ಕಾಣುತ್ತವೆ. ಆದರೂ ಕೆರೆಗೆ ಹಾರವಾಗಲು ಎಲ್ಲ ಹೆಣ್ಣು ಮಕ್ಕಳು ನಿರ್ಲಿಪ್ತವಾಗಿ ತ್ಯಾಗದ ಒಂದೇ ಮನಸ್ಸಿನಿಂದ ಮುಂದಾಗಲಾರರು. ಅವರಿಗೂ ತಳಮಳವಿದೆ. ಆಹುತಿಯಾಗುವುದಲ್ಲಿ ನೋವಿದೆ. ತನ್ನ ಪ್ರೀತಿಯ ಗಂಡ ಮತ್ತು ಮಕ್ಕಳನ್ನು ತೊರೆಯುವುದರಲ್ಲಿ ದುಃಖವಿದೆ. ಇಂತಹ ತಳಮಳಗಳನ್ನು ಚಿತ್ರಿಸುವಲ್ಲಿ ಕಾವ್ಯ ಮೂಡಿಬಂದಿದೆ. ಕೆರೆಗೆ ಹಾರದಲ್ಲಿ ಗೆಳತಿಯನ್ನು ಸಲಹೆ ಕೇಳುತ್ತಾಳೆ. ಆಕೆ ಪರಂಪರೆಯ ಪ್ರತೀಕವೇ ಆಗಿ ನುಡಿದಾಗ ಅವಳು ಅಸಹಾಯಕಳಾಗುತ್ತಾಳೆ. ಇದೇ ರೀತಿಯ ಅಸಹಾಯಕ ಮನಸ್ಥಿತಿ 'ಒಡ್ಡಬೋವಿ'ಯ ನಾಯಕಿಗೆ, ತವರಿಗೆ ಅತ್ತೆಮನೆಯವರ ಮೇಲೆ ದೂರುವುದು ತಪ್ಪು. ಇದೇ ಕಾನೂನಿನಂತೆ ಕೆಲಸಮಾಡಿದೆ. ಇದನ್ನು ಮುರಿಯುವುದನ್ನು 'ಒಡ್ಡರ ಬೋವಿ' ಕಥನ ಗೀತೆಯಲ್ಲಿ ಕಾಣುತ್ತೇವೆ. ಆದರೆ ತವರವರ ಸಹಾಯ ದೊರೆಯದೆ ಅದರ ವಿರುದ್ಧದ ಧ್ವನಿ ಅವರಿಂದ ಬಂದಾಗ ಆಕೆಯೂ ತನ್ನ ಹಳೆಯ ಸ್ಥಿತಿಗೆ ಮರಳುತ್ತಾಳೆ. ಅಂದರೆ ಪ್ರತಿಭಟನೆಗೆ ಯಾರೂ ಕೂಡ ಕೈ ಜೋಡಿಸದಿದ್ದಾಗ ಒಬ್ಬಳೇ ಹೆಣ್ಣು ಒಟ್ಟು ಸಮಾಜವನ್ನೇ ವಿರೋಧಿಸಿ ಇದರಿಂದ ದೂರ ಸರಿಯುವ ಬದುಕು ನೆನೆಸಲು ಸಾಧ್ಯವಿಲ್ಲ. ಆಹುತಿಯಾಗುವುದನ್ನು ವಿರೋಧಿಸುವ ಮನಸ್ಸನ್ನು ಇಲ್ಲಿ ಸೂಚಿಸಲಾಗಿದೆಯಲ್ಲ, ಅದೇ ದೊಡ್ಡ ಕಷ್ಟದ ವಿಚಾರವೆಂದು ನಾವು ತಿಳಿಯಬೇಕಾಗಿದೆ. ಆದರೆ ಅದೇ ವಸ್ತುವುಳ್ಳ 'ಕೆರೆಯ ಹೊನ್ನಮ್ಮ' (ಅಪ್ರಕಟಿತ ಕಥನ ಗೀತೆ) ಕಥನ ಗೀತೆಯಲ್ಲಿ ತವರವರು ಆಕೆಗೆ ಸಮಾಧಾನ ಮಾಡಿ, ನಿನ್ನ ಅತ್ತೆ ಮನೆಯವರು ನಿನಗೆ ಕೆರೆಗೆ ಆಹುತಿ ಕೊಟ್ಟರೆ ನೋಡಿಕೊಳ್ಳುವುದಾಗಿ ಹೇಳುತ್ತಾರೆ. ಅವಳಿಗೆ ಧೈರ್ಯ ನೀಡುತ್ತಾರೆ. ಆದರೆ ಅವಳು ಕೆರೆಗೆ ಆಹುತಿಯಾಗುತ್ತಾಳೆ. ಅದಕ್ಕೆ ವಿರೋಧವನ್ನು ತವರವರು ವ್ಯಕ್ತಪಡಿಸುತ್ತಾರೆ. ಅವರ ಮನೆಯನ್ನು ಕೆಡವುತ್ತಾರೆ. ಸಂಕೇತಿಕವಾಗಿ ಆ ಕುಟುಂಬದ ನಾಶವನ್ನು ಆ ಗೀತೆ ನೀಡುತ್ತದೆ. ಪ್ರೀತಿಯಿಂದ ಸಹಕರಿಸಿದ ನಾದಿನಿಯನ್ನು ಬಿಟ್ಟು ಅವರ ಮನೆಯನ್ನು ನಾಶಮಾಡಿದರೆಂದು ಹಾಡುಗಾರ್ತಿ ಹೇಳಿದ್ದನ್ನು ಇಲ್ಲಿ ಗುರುತಿಸಬಹುದು.

ತಂದೆ ತಾಯಿ ಬಂದಾರೂ
ನಿನ್ನ ಗ್ವಾಡೇ ಪೆಂಟೆ ತೆಗೆದಾರೋ
ಹೋಗು ಹೋಗುತೀನಿ ಮಾವನವರೆ
ಅಷ್ಟಾಕೆ ಬಂದಾವೊ ಇಷ್ಟಾಕೆ ಬಂದಾವೊ
ಕತ್ತು ಮುಣಗ್ಯಾತೊ
ಏಳು ಜನ ಅಣ್ಣೋರು ಬಂದಾರು
ನಿನ್ನ ಮನೆಯ ತೆಗೆದಾರು [ಅಪ್ರಕಟಿತ ಜನಪದಗೀತೆ]

ಹೀಗೆ ಹೆಣ್ಣು ಬಲಿಯಾಗುವ ಕತೆಗಳಲ್ಲಿ, ಆಕೆಯಲ್ಲಿ ತ್ಯಾಗ

ಪ್ರೀತಿ ಮುಂತಾದ ಗುಣಗಳನ್ನು ಆರೋಪಿಸಿದ್ದಾರೆ. ಇಂತಹ ಗುಣಗಳು, ಆಕೆಯಲ್ಲಿ ಕಾಣುವ ತಳಮಳ, ಬೇಸರ ಮತ್ತು ಅದರ ಬಗ್ಗೆಯ ವಿರೋಧವನ್ನು ಕಡಿಮೆ ಪ್ರಮಾಣದಲ್ಲಿ ಕಂಡು ಬರುತ್ತವೆ. ಆಕೆಯನ್ನು ದೇವತೆ ಮಾಡುವಲ್ಲಿ ಇರುವ ಆಸಕ್ತಿ ಮನುಷ್ಯಳಾಗಿ ನೋಡುವುದರಲ್ಲಿ ಇಲ್ಲ. ಒಂದು ಜೀವಕ್ಕೆ ಬದುಕಲು ಇರುವ ಸ್ವತಂತ್ರ್ಯವನ್ನು ಕಸಿದುಕೊಂಡ ಬಗ್ಗೆ ನೋವನ್ನು ಸ್ವಲ್ಪಮಟ್ಟಿಗೆ ಈ ಗೀತೆಗಳು ದಾಖಲಿಸಿವೆ ಎನ್ನುವುದರಲ್ಲಿ ಅನುಮಾನವಿಲ್ಲ.

ಇಂತಹ ಬೇಸರಗಳಿಂದಾಗಿಯೇ ಜನಪದ ಸ್ತ್ರೀ ಹೆಣ್ಣಿನ ಹುಟ್ಟಿನ ಬಗ್ಗೆಯೇ ಬೇಸರ ವ್ಯಕ್ತಪಡಿಸುತ್ತಾಳೆ. "ಹೆಣ್ಮಕ್ಕಳಾಗಿ ಹುಟ್ಬಾರದೇಲು ಜಲುಮಕ್ಕೆ" ಎಂಬ ಉದ್ಗಾರ ಆಕೆಯಲ್ಲಿರುವ ನೋವನ್ನು ಮನುಷ್ಯ ಸಮಾಜ ಮಾಡಿದ ಲಿಂಗತಾರತಮ್ಯ ವ್ಯತ್ಯಾಸವನ್ನು ಗುರುತಿಸುತ್ತಿದ್ದೆ ಎಂದು ತಿಳಿಯಬೇಕಾಗಿದೆ. ಜನಪದ ಸಾಹಿತ್ಯದಲ್ಲಿ ಹೆಣ್ಣಿನ ಜವಾಬ್ದಾರಿ ತವರವರು ಹೊರುತ್ತಿಲ್ಲ. 'ಕೊಟ್ಟಮನೆಯಲ್ಲಿ ಅವಳು ಇಟ್ಟಾಂಗ ಇರಬೇಕು' ಎಂಬ ತತ್ತ್ವದ ಬಗ್ಗೆ ಅವರಿಗೆ ಬೇಸರವಿದೆ. ಕಷ್ಟದಲ್ಲಿ ತವರನ್ನು ಆಶ್ರಯಿಸುವಂತಿಲ್ಲ. "ಗಂಜಿ ಕುಡಿದಾರು ಗಂಡನ ಮನೆಲೇಸು" ಎಂಬ ಮಾತನ್ನು ಹೆಣ್ಣೆ ಹೇಳಬೇಕಾದರೆ ಅದರ ಹಿಂದಿರುವ ನೋವನ್ನು ನಾವು ಗುರುತಿಸಿಕೊಳ್ಳಬೇಕು. ಮದುವೆಯ ನಂತರದಲ್ಲಿ ಅವಳು ಹುಟ್ಟಿ ಬೆಳೆದ ಮನೆ ಪರಮನೆಯಾಗುತ್ತದೆ. ಆಕೆಯ ಅಣ್ಣ ತಮ್ಮರು ದೂರವಾಗುತ್ತಾರೆ. ಅಲ್ಲಿ ಆಕೆ ದುಡಿಯುವುದರಿಂದ ಉಟ್ಟ ಬಟ್ಟೆಯಲ್ಲದೆ ಮೂರನೆಯದಿಲ್ಲ ಎಂಬ ಒಂದು ಗಾದೆ ಅದರ ಸತ್ಯವನ್ನು ತಿಳಿಸುತ್ತದೆ.

ಹುಟ್ಟುದ ಮನೇಲಿಗೇದ್ರೆ
ಉಟ್ಟ ಬಟ್ಟೆಯೇ ಹೊರತು
ಮೂರನೆ ಸೀರೆ ಇಲ್ಲ

[ಪು: 145 ಬೀದಿಮಕ್ಕಳು ಬೆಳದೊ]

ಮದುವೆಯ ನಂತರದಲ್ಲಿ ತವರವರಿಗೆ ಹೆಣ್ಣಿನ ಬಗ್ಗೆ ಜವಾಬ್ದಾರಿಯೇ ಇಲ್ಲದಂತೆ ಮತ್ತು ಆಕೆ ತಮ್ಮ ಮನೆಯ ಮಗಳೆಂಬ ಕಲ್ಪನೆಯೇ ಒಂದು ಕಾಲಘಟ್ಟದಲ್ಲಿ ಇರಲಿಲ್ಲ. ಮಹಿಳಾ ಜಾಗೃತಿ ಮೂಡುತ್ತಿರುವ ಈ ಕಾಲದ ಸಂದರ್ಭದಲ್ಲಿ ಇಂತಹ ಕೆಲವು ಆಲೋಚನೆಗಳಿಗೆ ಬೆಲೆ ಬರತೊಡಗಿದೆ. ಹೆಣ್ಣಿಗಾದ ಅನ್ಯಾಯದ ಬಗ್ಗೆ ಹೆಚ್ಚು ಹೆಚ್ಚಾಗಿ ತಿಳಿಯಬೇಕಾದರೆ ಜನಪದ ಸಾಹಿತ್ಯವನ್ನೇ ನೋಡಬೇಕು. ಇಲ್ಲಿ ವಿರೋಧದ ಧ್ವನಿ ಪರಿಚಯವು ಅಷ್ಟಾಗಿ ಕಾಣದಿದ್ದರೂ ಆಕೆಗೆ ಒದಗುವ ನಿಷ್ಠೂರಗಳು, ನೋವುಗಳ ಪರಿಚಯವಂತೂ ಬೇಕಾದಷ್ಟಾಗುತ್ತದೆ. ಇದಕ್ಕಾಗಿಯೇ ಮೌಲ್ಯವ್ಯವಸ್ಥೆಯಲ್ಲಿ ಹೆಣ್ಣಿಗಾದ ಅನ್ಯಾಯಗಳೇನು, ಅವುಗಳ ರೀತಿಗಳಾವುವು ಎಂಬುದನ್ನು ಅರಿತು ಗುರುತಿಸುವ ಅಗತ್ಯವಿದೆ. ಅದಕ್ಕೆ ಬೇಕಾದ ಪರ್ಯಾಯ ವ್ಯವಸ್ಥೆಗಳನ್ನು ಕಂಡುಕೊಳ್ಳಬೇಕಾಗಿದೆ.

ಜನಪದ ಸಾಹಿತ್ಯದಲ್ಲಿ ಕಂಡು ಬರುವ ತಾಯಿ ಮತ್ತು ಅತ್ತೆಯ ಪಾತ್ರವನ್ನು ಹೆಚ್ಚಾಗಿ ವಿಮರ್ಶಿಸಬೇಕಾಗಿದೆ. ಯಾಕೆಂದರೆ ಮಗಳು ಮತ್ತು ಸೊಸೆಯಾದ ಹೆಣ್ಣು ಮಗಳೇ ತಾಯಿ, ಅತ್ತೆಯ ಪಾತ್ರವನ್ನು ಕಾಲಕ್ರಮದಲ್ಲಿ ನಿರ್ವಹಿಸುತ್ತಿರುತ್ತಾಳೆ. ಇಂತಹ ಹೆಣ್ಣು ಮಗಳೊಬ್ಬಳ ಪಾತ್ರದಲ್ಲಿ ಮಾನದಂಡಗಳು ಬದಲಾಗುತ್ತ ಹೋಗುತ್ತವೆ. ಆಕೆ ತನ್ನ ತಾನು ಸ್ವವಿಮರ್ಶಿಸಿಕೊಳ್ಳಲಾರದೆ, ತಾನು ಅನುಭವಿಸಿದ ಕಹಿಗಳಿಗೆಗಳಿಗೆ ತನ್ನ ಮಗಳನ್ನು ಮತ್ತು ಸೊಸೆಯನ್ನು ಒತ್ತಾಯಪೂರ್ವಕವಾಗಿ ಸಿದ್ಧಗೊಳಿಸುತ್ತಾಳೆ. ಸೊಸೆಯನ್ನು ಸ್ವೀಕರಿಸುವ ಅತ್ತೆಯ ಪಾತ್ರ, ಮಗಳನ್ನು ಬೆಳೆಸುವ ತಾಯಿಯ ಪಾತ್ರ ಈ ಎರಡು ಗುಣಗಳು ಅವಳಲ್ಲಿ ವಿರೋಧಬಾಸಗಳು. ಒಂದೇ ಪಾತ್ರದಲ್ಲಿ ಕಾಣುವ ಇಂತಹ (role conflict) ಪಾತ್ರ ಸಂಘರ್ಷವನ್ನು ಕುರಿತ ಅಧ್ಯಯನಗಳು ಬರಬೇಕಾಗಿವೆ. ಪುರುಷಪ್ರಧಾನ ಮೌಲ್ಯವ್ಯವಸ್ಥೆ ಇದಕ್ಕೆ ಕಾರಣವೆಂದು ಮೇಲುನೋಟಕ್ಕೆ ಕಂಡರೂ ಅದಕ್ಕೆ ಕಾರಣವಾಗುವ ಇತರೇ ಅಂಶಗಳನ್ನು ಗುರುತಿಸಿ ಚರ್ಚಿಸಬೇಕಾಗಿದೆ.

'ಹೆಣ್ಣಿಗೆ ಹೆಣ್ಣೇ ಶತೃ' ಎಂಬ ನಾಡುನುಡಿ ಹುಟ್ಟು ಪಡೆದಿದ್ದು ಇಂತಹ ಸಂದರ್ಭಗಳಲ್ಲಿಯೇ ಆಗಿದೆ. ಹೊರ ಜಗತ್ತಿಗೆ ತಮ್ಮನ್ನು ತೆರೆದುಕೊಳ್ಳದೆ, ಹಾಗೆ ತೆರೆದುಕೊಳ್ಳುವುದು ಸಮಾಜಿಕವಾಗಿ ಬಹಿಷ್ಕರಿಸಿದುದರಿಂದ ಆಕೆಯ ಕ್ಷೇತ್ರ ಬಹಳ ಸೀಮಿತವಾಗಿತ್ತು. ಮನೆಯೇ ಅವಳ ಕಾರ್ಯವ್ಯಾಪ್ತಿಯ ಕ್ಷೇತ್ರ. 'ಸುತ್ತಿ ಹೆಣ್ಣು ಕೆಟ್ಟಳು' ಎಂಬ ಮಾತು ಹೆಣ್ಣನ್ನು ನಿಯಂತ್ರಿಸಿದ ವಿಧಾನವನ್ನು ತಿಳಿಸುತ್ತದೆ. ಇದರಿಂದಾಗಿಯೇ ಆಕೆ ತನ್ನ ಸೀಮಿತವಾದ ಮನೆಯಲ್ಲಿಯೇ ಅವಳ ಸ್ಥಾನವನ್ನು

ಭದ್ರಿಸಿಕೊಳ್ಳಬೇಕಾದ ಒತ್ತಡಕ್ಕೆ ಮಣಿದಳು. ಬಲಿಷ್ಠರು ಹೋರಾಟದಲ್ಲಿ ಗೆಲ್ಲುವವರೆಂಬ ಮಾತು ಸತ್ಯ. ಹೀಗಾಗಿ ಇದರ ಹೋರಾಟದಲ್ಲಿ ಹೆಣ್ಣಿಗೆ ಹೆಣ್ಣೇ ಪ್ರತಿಸ್ಪರ್ಧಿಗಳು. ಭಾವನಾತ್ಮಕವಾದ ಪ್ರತಿಸ್ಪರ್ಧಿತ್ವದಲ್ಲಿ ಹೆಣ್ಣುಗಳ ಸೆಣಸಾಟ ನಿರಂತರವಾಗಿ ನಡೆಯುತ್ತಾ ಬಂದಿದೆ. ಈ ಹೋರಾಟದ ಫಲವಾಗಿ ಅವಳ ಪಾತ್ರ ವಿಘಟಿಸುತ್ತಾ ವಿವಿಧ ಮುಖಗಳು ತೆರೆದುಕೊಂಡವು ಎನ್ನಬಹುದು. ಕೆಲಸಗಳ ವಿಂಗಡನೆ, ಊಟ, ಬಟ್ಟೆ, ವಡವೆ ಹೀಗೆ ಹಲವಾರು ಸೌಕರ್ಯಗಳು ಅವಳ ಸ್ಥಾನ, ಅಂತಸ್ಥಿಗೆ ಅನುಗುಣವಾಗಿ ಹಂಚಿಕೆಯಾಗುತ್ತಿದ್ದವು. ಇದರಿಂದಾಗಿ ಸ್ಥಾನಕ್ಕಾಗಿಯೇ ಸ್ಪರ್ಧೆ ಬೆಳೆಯಿತು. ಇದರ ಜೊತೆ ಜೊತೆಗೆ ಶೋಷಣೆ ಶತೃತ್ವ ಬೆಳೆಯಲು ಅವಕಾಶಗಳು ರೂಪಗೊಂಡವು. ಇಂತಹ ಸಂದರ್ಭದಲ್ಲೆಲ್ಲಾ ಪುರುಷ ತೀರ್ಮಾನಗಳು ಅಂತಿಮವಾಗಿ ತೀರ್ಪನ್ನು ನೀಡಿದವು. ಅವರ ತೀರ್ಪಿನ ಸರಿತಪ್ಪಿನ ಆಲೋಚನೆ ಇವತ್ತಿನವರೆಗೂ ಕಂಡುಕೊಳ್ಳುವ ಹೋರಾಟ ಸಾಗಿದೆ.

'ಈರೋಬಿ' ಕಥನಗೀತೆಯಲ್ಲಿ ಹೆಣ್ಣು ತನ್ನನ್ನು ತಾನೇ ಕೊಂಡಕ್ಕೆ ಅರ್ಪಿಸಿಕೊಳ್ಳಲು ಸಿದ್ಧವಾಗುತ್ತಾಳೆ. ಕೊಂಡಕ್ಕೆ ಆಹುತಿಯಾಗಲು ಬೇಡವೆಂದು ತವರವರು ಕೇಳಿಕೊಳ್ಳುತ್ತಾರೆ. ಎಲ್ಲರ ಮಾತನ್ನು ನಿರಾಕರಿಸಿ ತಾನು ಆಹುತಿಯಾಗುವುದೇ ಸರಿಯೆಂದು ತೀರ್ಮಾನ ತೆಗೆದುಕೊಳ್ಳುತ್ತಾಳೆ. ಆ ತೀರ್ಮಾನಕ್ಕೆ ಆಕೆಯ ಬದುಕಿನ ಕಷ್ಟವೇ ಕಾರಣ. ಗಂಡಸತ್ತ ಸುದ್ದಿ ಕೇಳಿ ಆಕೆ ತಾನು ಇನ್ನೊಬ್ಬರ ಹಂಗಿಗೆ ಬೀಳಬಾರದು. ತನ್ನ ಬದುಕು ಇನ್ನೊಬ್ಬರ ಕೈಕೆಳಗೆ ನಿಲ್ಲಬಾರದು ಎಂದು ತಿಳಿದುಕೊಂಡು ಹೋಗಲು ತೀರ್ಮಾನಿಸುತ್ತಾಳೆ. ಸಾವಿನ ಜೊತೆಯಲ್ಲಿಯೇ ನಾದಿನಿ, ಅತ್ತೆ, ಅತ್ತಿಗೆಯವರ ಜೊತೆಗಿದ್ದ ಶತೃತ್ವ ಅಳಿಯುತ್ತದೆ. ಇದು ಹೆಣ್ಣಿನ ವಾಸ್ತವ ಚಿತ್ರಣವನ್ನು ನೀಡುತ್ತದೆ.

> ಗಂಡ ಸಾಯೋಕಿಂತ ಮುಂಡ್ಯಾಗೊಕಿಂತ
> ಕಂಡೋರ ಮನೆಯ ಕಸನ್ಹಾಕಿ ಸಾಯೋಕ್ಕಿಂತ
> ಕೊಂಡವನ್ನೋದೆ ಕಡುಲೇಸ
> ರಾಗಿ ಮಾಡಿದ ಕಲ್ಲ ಬೀದಿಗೆ ಚೆಲ್ಲೋಳೆ
> ನಾದಿನಿ ನಿನ್ನ ವಿಷವ ಬಿಡಲಿಲ್ಲ ನವಿಬ್ಬರ
> ಗುದ್ದಾಟವಿಲ್ಲೀಗೆ ಸವೆದ್ಹೋದೊ
>
> [ಪು. 24, ಈರೋಬಿ ಜನಪದ ಖಂಡ ಕಾವ್ಯಗಳು]

ಹೀಗೆ ಜನಪದ ಸಾಹಿತ್ಯದಲ್ಲಿ ಒಂದು ಕಡೆ ಹೆಣ್ಣುಗಳ ನಡುವೆಯೇ ಆಗುವ ಸ್ಪರ್ಧೆಗಳನ್ನು, ಮತ್ತೊಂದು ಕಡೆ ಅದಕ್ಕೆ ಕಾರಣವಾಗುವ ಹಂಗಿನ ಬಾಳು, ಭದ್ರತೆಯಿಲ್ಲದ ತವರು ಮತ್ತು ಅತ್ತೆ ಮನೆಯ ಸ್ಥಿತಿ, ಸ್ವಭಾವಗಳನ್ನು ಕಾಣುತ್ತೇವೆ.

ಇದಕ್ಕೆ ಹೆಣ್ಣು ಮಕ್ಕಳಲ್ಲಿಯೇ ರೂಪುಗೊಂಡಿರುವ ಪ್ರಧಾನ ಮೌಲ್ಯ ವ್ಯವಸ್ಥೆಯ ಗುಣಗಳು ಕಾರಣವಾಗುತ್ತವೆ. ಅವುಗಳನ್ನು ಅನುಸರಿಸಿ ಬದುಕುವುದೇ ತಮ್ಮ ಧರ್ಮವೆಂಬ ಅಭಿಪ್ರಾಯ. ಇದರಲ್ಲಿಯೇ ಜೀವನದ ಸೌಖ್ಯ ಇರುವುದೆಂಬುದರ ಭ್ರಮೆ ಇವರಲ್ಲಿ ಮನೆ ಮಾಡಿವೆ. ಆದರೆ ಅವೆಲ್ಲವೂ ಸರಿ ಎಂದು ಅವರು ಸಾರಾಸಗಟಾಗಿ ಒಪ್ಪಿಕೊಂಡವರಲ್ಲ. ಹಾಗೆಯೇ ಅವುಗಳನ್ನು ಪ್ರಶ್ನಿಸುವ ಧೈರ್ಯವನ್ನು ವಹಿಸಿದವರಲ್ಲ. ಇದರಿಂದಾಗಿ ಅವರಲ್ಲಿಯೇ ಒಂದು ರೀತಿಯ ತಹತಹಿಕೆ ತಳಮಳ ಅಸಹಾಯಕತೆ, ಮರುಕ ಮುಂತಾದ ಎಲ್ಲ ಭಾವಗಳೂ ಮಡುಗಟ್ಟಿವೆ.

ಹೆಣ್ಣು ಮಗುವಾದಾಗ ಭಯಪಡುವ ಮನಸ್ಸೇ ಹೆಣ್ಣು ಹಡೆಯದ ಹೆಣ್ಣನ್ನು ಬಂಜೆ ಎನ್ನುವರು. ಗಂಡು ಹತ್ತು ಹಡೆದಾರು ಒಂದಾದರೂ ಹೆಣ್ಣು ಆರುತಿ ಬೆಳಗಲು ಬೇಕು. ಇದು ಹೆಣ್ಣಿನ ಪ್ರಾಮುಖ್ಯತೆಯನ್ನು ಹೇಳುತ್ತದೆ.

> ಹತ್ತು ಗಂಡು ಹಡೆದಾರು ಮತ್ತೆ ಬಂಜೆನ್ನುವರು
> ದಟ್ಟಿ ಉಡುವ ದ್ರೌಪದಿ ಹುಟ್ಟಿದರ ತಂಗ್ಯಮ್ಮ
> ಬಂಜೆಂಬ ಶಬುದಾ ಅಳಿದಾವೂ

ಹೆಣ್ಣು ಗಂಡು ಎರಡು ಸಮಾಜದ ಮುಂದುವರಿಕೆಯಲ್ಲಿ ಅಗತ್ಯವಾದ ವ್ಯಕ್ತಿತ್ವಗಳೆಂದು ತಿಳಿಸಿದ್ದಾರೆ. ಅದರ ಜೊತೆಯಲ್ಲಿಯೇ ಹೆಣ್ಣಾಗಿ ಹುಟ್ಟಿದ ಜೀವಿಗೆ ಅದರದೆ ಆದ ನೋವುಗಳೆಷ್ಟು ಎಂಬುದರ ಪರಿಚಯವನ್ನು ಮಾಡಿ ಕೊಡುತ್ತಾರೆ.

> ಹೆಣ್ಣು ಜೀವಕ್ಕೆ ಕುತ್ತೆಷ್ಟು ಕೊರೆತೆಷ್ಟು
> ಹೇಳಿದರ ಮುಳ್ಳು ಮೈಗೆಲ್ಲಾ ಕೊರೆತವ್ವ
> ಮಾರಾಯ್ನು ಬಿಸಲ ವರತೆಂಗ
>
> [ಪು : 109, ಗರತಿ ಹಾಡು]

ಇದರಿಂದಾಗಿಯೇ ಅವರ ಮನಸ್ಸಿನಲ್ಲಿ ಹೆಣ್ಣು ಆಗುವುದೇ ತಪ್ಪಾಗಿ ಬಿಟ್ಟಿದೆ. ಏಳೇಳು ಜನ್ಮದಲ್ಲೂ ಹೆಣ್ಣು ಆಗುವುದು ಬ್ಯಾಡವೆಂಬುದು ಇವರ ಅನಿಸಿಕೆ. ಹೆಣ್ಣಾಗುವುದ

ಕ್ಕಿಂತ ಮಣ್ಣಿನ ಮೇಲೆ ಮರವಾಗಿ ಹುಟ್ಟಿದರೆ ಲೇಸೆಂದು ಹೇಳುವ ಮನಸ್ಸಿನ ಸ್ಥಿತಿಯನ್ನು ತಿಳಿಯಬೇಕು.

ಹೆಣ್ಣಾಗಿ ಹುಟ್ಟೋಕ್ಕಿಂತ ಮಣ್ಣು ಆಗೋದು ಮೇಲು
ಮಣ್ಣೀನ ಮ್ಯಾಲೊಂದು ಮರವಾಗಿ ಇದ್ದಾರೆ
ಬಂದವರಿಗೆಲ್ಲ ನೆರಳಾಗಿ [ಗರತಿ ಹಾಡು]

ಹೆಣ್ಣುತನವನ್ನು ನಿರಾಕರಿಸಿ ಅದಕ್ಕೆ ಬೇರೆ ರೂಪವಾಗಿ ಹುಟ್ಟು ಪಡೆಯಲು ಬಯಸುವುದು ಒಂದರ್ಥದಲ್ಲಿ ಆಕೆ ಈ ಸಮಾಜಕ್ಕೆ ನೀಡಿದ ಪ್ರತಿಭಟನೆ. ಆದರೆ ಇರುವ ಸ್ಥಿತಿಯಲ್ಲಿಯೇ ನ್ಯಾಯವನ್ನು ಕೇಳಿ, ಪಡೆದು, ಅನುಭವಿಸುವ ವಿಧಾನ ಹೆಚ್ಚು ಅರ್ಥಪೂರ್ಣವಾದದ್ದು. ಆದರೆ ಅದನ್ನು ಪಡೆದುಕೊಳ್ಳಲಾರದ ಅಸಹಾಯಕತೆ ಇರುವ ಸಂದರ್ಭದಲ್ಲಿ, ಹೋರಾಟದ ಮಾರ್ಗಗಳು ಸೃಷ್ಟಿಯಾಗದ ಕಾಲಘಟ್ಟದಲ್ಲಿ, ಇಂತಹ ನಿರಾಕರಣೆ ಮತ್ತು ಇರುವ ಸ್ಥಿತಿಗಳ ನಡುವಿನ' ದ್ವಂದ್ವಸ್ಥಿತಿ ಕಾಣಿಸಿ ಕೊಳ್ಳುತ್ತದೆ.

ಹೀಗೆ ಜನಪದ ಸಾಹಿತ್ಯದಲ್ಲಿ ಬದಲಾವಣೆಗಳನ್ನು ಅಪೇಕ್ಷಿಸುವ ಮತ್ತು ಇರುವ ಸ್ಥಿತಿಗಳ ಬಗ್ಗೆ ಬೇಸರಗಳು ಕಂಡು ಬರುತ್ತವೆ. ಆದರೆ ಬದಲಾವಣೆಯ ಖಚಿತ ಮಾರ್ಗ ಇಲ್ಲಿ ಕಂಡುಕೊಂಡಿಲ್ಲ. ಏನಾಗಬೇಕೆಂಬುದರ ಅರಿವು ಇಲ್ಲಿ ದೊರೆಯುವುದಿಲ್ಲ.

ಗಾದೆ, ತ್ರಿಪದಿಗಳಲ್ಲಿ ಕಂಡು ಬರುವ ಹೆಣ್ಣಿನ ಬಗೆಗಿರುವ ಪುರಾಣದ ಕಲ್ಪನೆಗಳನ್ನು ನಾವು ನೋಡಬೇಕು. ಇವುಗಳು ಹೆಣ್ಣನ್ನು ಎರಡನೆಯ ದರ್ಜೆಯ ಪ್ರಜೆಯಾಗಿ ಕಾಣುತ್ತಿರುವುದನ್ನು ತಿಳಿಸುತ್ತವೆ. 'ಹೆಣ್ಣಿನ ಬುದ್ಧಿ ಮೊಣಕಾಲಿನ ಕೆಳಗೆ', 'ಹೆಣ್ಣು ತಿರಗಿ ಕೆಟ್ಟಳು ಗಂಡು ತಿರಗದೆ ಕೆಟ್ಟ', 'ನೂರು ಗಂಡು ಒಂದಾದರೂ ಎರಡು ಜಡೆ ಒಂದಾಗದು', 'ಧೀರ ಗಂಡಾದ್ರೆ ಗೆದ್ದು ಬರುವೆ ಹೆಣ್ಣಾದ್ರೆ ಸೋತು ಬರುವೆ', 'ಕೈಗೆ ಬಳೆ ತೊಟ್ಟಿದ್ದಿಯಾ' ಇವು ಹೆಣ್ಣಿನ ಬುದ್ಧಿ ಮತ್ತು ಶಕ್ತಿಯನ್ನು ಕುರಿತು ಮಾಡಲಾದ ಅವಹೇಳನಗಳಾಗಿವೆ. ಇವು ಸಮಾಜದ ಪ್ರಮುಖ ನಿಲುವುಗಳನ್ನು ತಿಳಿಸುತ್ತವೆ. ಕೆಲವು ಬಾರಿ ಇವು ಕಾನೂನುಗಳಾಗಿ ಬಳಕೆಯಾಗುವುದುಂಟು. ಗಾದೆಗಳು ಹಲವರ ಅನುಭವಗಳಿಂದ ರೂಪುಗೊಂಡವು. ಇವು ಸತ್ಯ ಸಂಗತಿಗಳೆಂದು ಮಾನ್ಯವಾಗಿವೆ. ಇಂತಹ ಅನುಭವಗಳು ಗಂಡಿನವೋ ಹೆಣ್ಣಿನವೋ ತಿಳಿಯಲು ಸಾಧ್ಯವಿಲ್ಲ ಆದರೆ ಗಂಡಿನ ಅನುಭವಗಳೇ ಹೆಚ್ಚಾಗಿ ಕಾನೂನುಗಳಾಗಿ ಕಾರ್ಯರೂಪಕ್ಕೆ ಬರುತ್ತಿದ್ದವು. ಆಳುವವರು ನಿರ್ಮಿಸಿದ ಸ್ಥಿತಿಯಲ್ಲಿಯೇ ಆಳಿಸಿಕೊಳ್ಳುವವರ ಬದುಕು ರೂಪುಗೊಳ್ಳುತ್ತಿತ್ತು. ಇಂತಹ ಸಂದರ್ಭದಲ್ಲಿ ಇವು ನೀಡುವ ಮೌಲ್ಯಗಳು ಯಾವ ರೀತಿಯಲ್ಲಿ ಕೆಲಸ ಮಾಡುತ್ತವೆ ಎಂದು ತಿಳಿಯಬಹುದು. ಇದರಿಂದಾಗಿಯೇ ಹೆಣ್ಣಿನ ಬುದ್ಧಿಗೆ ಯಾವತ್ತೂ ಮಾನ್ಯತೆ ದೊರೆಯುವುದು ಕಷ್ಟವಾಗಿದೆ. ಅವಳು ಮಾಡುವ ಕೆಲಸಗಳಿಗೆ ಮೌಲ್ಯವೂ ಕಡಿಮೆಯಾಗಿದೆ. ಇದರಿಂದಾಗಿಯೇ ಮೃದು ಸ್ವಭಾವದ ಗಂಡನ್ನೂ ಇವರು ಗೇಲಿ ಮಾಡಿದ್ದಾರೆ.

ಹೆಂಗಸ್‌ನಂತೋನು ಹೇಡಿಮೊಕದೊನು
ಗಂಡಸರೊಳಗೆಲ್ಲ ಕಳಕೊಂಡೋನು
[ಪು: 149, ಬೀದಿಮಕ್ಕಳು ಬೆಳದೊ]

ಇವು ಹೆಣ್ಣು ಮತ್ತು ಗಂಡನ್ನು ವಿಭಾಗಿಸುವ ಮಾನದಂಡಗಳಾದವು. ಇದೇ ಮಾನದಂಡಗಳು ಜೋರಾದ ಹೆಣ್ಣನ್ನು ಗಂಡುಬೀರಿ ಎಂದು ಕರೆದು ಅವಮಾನಿಸಿದೆ. ಈ ಎರಡು ರೀತಿಯಲ್ಲಿ 'ಗಂಡು', 'ಹೆಣ್ಣು' ತನಗಳು ಅದಲು ಬದಲಾಗದಂತೆ ನೋಡಿಕೊಳ್ಳುವ ಕಾಪಾಡುವ ಸಮಾಜದ ನಡಾವಳಿಗಳನ್ನು ನೋಡಬಹುದಾಗಿದೆ.

ಹೆಣ್ಣಿಗೆ ಮದುವೆ ಕಾನೂನು ಬದ್ಧ ಲೈಂಗಿಕತೆಯ ಅನುಮತಿಯಾದರೆ ಗಂಡಿಗೆ ಇದರ ಮಿತಿಯಿಲ್ಲ. ಮದುವೆಯಾದ ಹೆಣ್ಣು ಮಗಳು ಅತ್ತೆ ಮನೆಯಲ್ಲಿ ಇಟ್ಟಾಂಗ ಇರಬೇಕು. ಅಲ್ಲಿ ಅವಳ ಅಪೇಕ್ಷೆಗೆ ಮಾನ್ಯತೆಯಿಲ್ಲ. ಇದು ಸಮಾಜದ ಪ್ರಮುಖ ಕಾನೂನಾಗಿಯೇ ಕೆಲಸ ಮಾಡಿದೆ. ಇದು ಶಾಸನ ಬದ್ಧವಲ್ಲ, ನಿಯಮಬದ್ಧ ಕಾನೂನುಗಳಿಗೆ ಹೆಚ್ಚಿನ ಬೆಲೆ. ಇಂತಹ ನಿಯಮವನ್ನು ಆಸ್ತಿಹಂಚಿಕೆಯ ಸಂದರ್ಭದಲ್ಲಿ ಚೆನ್ನಾಗಿ ಗುರುತಿಸಬಹುದು. ಕಾನೂನು ಬದ್ಧವಾಗಿ ಹೆಣ್ಣಿಗೆ ಆಸ್ತಿ ಹಕ್ಕು ಇದ್ದರೂ ಅದನ್ನು ಕೇಳಿದ ಹೆಣ್ಣೇ ಎರಡು ಕಡೆಯಲ್ಲಿ ಟೀಕೆಗೆ ಗುರಿಯಾಗುತ್ತಾಳೆ. ಆಸ್ತಿ 'ಗಂಡಿನ' ಮೂಲಕವೇ ಮುಂದುವರಿಯುವುದೆಂಬ ನಿಯಮಬದ್ಧ ಕಾನೂನಿಗೆ ಜನ ಹೆಚ್ಚು ಬೆಲೆ ಕೊಡುತ್ತಾರೆ.

ಪಾಲೀಗೆ ಬಂದರೆ ನಾಲೀಗೆ ಸೀಳಿಸುವೆ
ನೋಡೋ ಕಣ್ಣುಗಳ ಇರಿಸುವೆ ಎಲೆಹೆಣ್ಣೆ
ಪಾಲು ನಿನಗ್ಹೆಂಗೆ ಸಲುವವೆ
[ಪು 128, ಗರತಿ ಹಾಡು]

ಈ ಮಾತು ತವರಿನ ಕಡೆಗೂ ಹಾಗೂ ಗಂಡನ ಮನೆ ಕಡೆಗೂ ಅನ್ವಯಿಸುವಂತಹದು. ಮನೆ ಪಾಲಾದರೆ ಹೆಣ್ಣನ್ನೇ ಅವಹೇಳನ ಮಾಡಲಾಗುವುದು. ಗಂಡಿನ ಸಮನಾಗಿ ಹೆಣ್ಣನ್ನು ಕಾಣದೇ ಹೋಗುವುದೇ ಇದಕ್ಕೆ ಕಾರಣವಾಗಿದೆ. ಇದಲ್ಲದೆ ಆಕೆಯ ಜೀವನದ ಪುಣ್ಯ ಹೆಚ್ಚುವುದು ಅವಳ ನಡತೆಯಲ್ಲಿಯೇ ಅಡಗಿದೆ. ಅವಳ ಹೆಚ್ಚು ಹೆಚ್ಚಿನ ತಾಳ್ಮೆ, ತ್ಯಾಗದ ಗುಣಗಳಲ್ಲಿ ಮೋಕ್ಷ ಸಿಕ್ಕಿಕೊಂಡಿದೆ. ಹೀಗೆ ಬಹಳ ಜಾಗರೂಕವಾಗಿಯೇ ಧರ್ಮದೊಂದಿಗೆ ಜೀವನವನ್ನು ಬೆಸೆದುಬಿಟ್ಟಿದ್ದಾರೆ. ಇರುವ ನೆಲದಲ್ಲಿ ಕಾಣದ ನೆಮ್ಮದಿಗಾಗಿ, ಸತ್ತನಂತರದ ನೆಮ್ಮದಿಯನ್ನು ತೊಡಕು ಹಾಕಿದ್ದಾರೆ.

ಜನಪದ ಸಾಹಿತ್ಯದಲ್ಲಿ ಇಂತಹ ಹೊಂದಾಣಿಕೆ ಬದುಕನ್ನು ಹೆಚ್ಚು ಹೆಚ್ಚಾಗಿ ಚಿತ್ರಿಸಿದ್ದರೂ ಅಲ್ಲೊಂದು ಇಲ್ಲೊಂದು ಅದನ್ನು ವಿರೋಧಿಸಿದ ನೆಲೆಗಳನ್ನು ಗುರುತಿಸಬಹುದಾಗಿದೆ. ಕೆರೆಗೆ ಆಹುತಿಯಾದ ಮಗಳ ತಂದೆ ತಾಯಿಗಳ ವಿರೋಧ, ಶೀಲಶಂಕಿಸಿ ಮನೆಯಿಂದ ಸೊಸೆಯನ್ನು ಹೊರಹಾಕಿದಾಗ ಮಗನೇ ಮುಂದಾಗಿ ತಂದೆ ತಾಯಿಗಳಿಗೆ ಶಿಕ್ಷೆ ನೀಡುವುದು, ನೊಂದ ಹೆಣ್ಣು ಮಗಳು ತವರಿಂದ ಸಹಾಯ ಸಿಗದೆ ಕೊಂಡಕ್ಕೆ ಆಹುತಿಯಾಗುವ ಸಂದರ್ಭದಲ್ಲಿ ತವರಿಗೆ ಶಾಪ ಹಾಕುವುದು, ಗಂಡನ ಮನೆ ಬಿಟ್ಟ ಹೆಣ್ಣನು ತವರವರು ಸೇರಿಸಿಕೊಳ್ಳದಾಗ ಗೆಳತಿಯ ಸಹಾಯದಿಂದ ಬದುಕು ರೂಪಿಸಿಕೊಳ್ಳುವುದು, ತಾನು ಬಯಸಿದ್ದನ್ನು ಕಾಣಲು ಇಚ್ಛಿಸುವ ಹೆಣ್ಣು ಮನೆಯವರ ವಿರೋಧದಲ್ಲೂ ಅದನ್ನು ಮಾಡಲು ಹೋಗುವದು ಹೆಣ್ಣಿನ ಬೇರೆ ರೂಪಗಳನ್ನು, ಸಮಾಜದ ಪ್ರಮುಖ ನಿಯಮಗಳಿಗೆ ಕೊಟ್ಟ ಪೆಟ್ಟನ್ನು ಇವುಗಳಿಂದ ತಿಳಿಯಬಹುದು.

ಆಲಂಬಿಗಿರಿ ಪದ; ದಂಡ ಬಂತವ್ವಾ ದಂಡ ಗೀತೆಗಳಲ್ಲಿ ಹಿರಿಯರು ಬ್ಯಾಡವೆಂದರೂ ಅವರು ಮಾಡಬೇಕೆಂಬುದನ್ನು ಮಾಡುತ್ತಾರೆ. ಅದರ ಪರಿಣಾಮವನ್ನು ಸಂಪ್ರದಾಯಿಕ ರೀತಿಗೆ ಹಾಡುಗಾರ್ತಿಯರು ತಂದು ನಿಲ್ಲಿಸಿದ್ದಾರೆ. ಆದರೆ ತನಗೆ ಅನಿಸಿದ್ದನ್ನು ಮಾಡುವ ಹೆಣ್ಣಿನ ಮನಸ್ಸನ್ನು ಇಲ್ಲಿ ನೋಡಬೇಕಾಗಿದೆ. ಸೊಲ್ಲಾಪುರದ ದಂಡನ್ನು ನೋಡಬಯಸುವ ಹೆಣ್ಣು ಮನೆಯವರ ವಿರೋಧದಲ್ಲೂ ನೋಡ ಹೋಗುತ್ತಾಳೆ.

ಬ್ಯಾಡ ಬ್ಯಾಡಂದರ ಭಾರಿ ಬಿರಿ ಹೋಗ್ಯಾಳ
ಹೋಗಿ ಅಗಸ್ಯಾಗ ನಿಂತಾಳ
ಡೋರ್ಯಾದ ಮ್ಯಾಲಕಿಯ ಬೆಳಕ
.... .... .... .... .... .... .... .... ....

ಹಾಗೆಯೇ ಆಲಂಬಿಗಿ ಪದದಲ್ಲಿ ಜಾತ್ರೆಯನ್ನು ನೋಡಲು ಹೆಣ್ಣೊಬ್ಬಳು ಇಷ್ಟಪಡುತ್ತಾಳೆ. ಅದನ್ನು ಹಿರಿಯರ ವಿರೋಧದಲ್ಲಿಯೂ ಆಕೆ ಜಾತ್ರೆಗೆ ಹೋಗುತ್ತಾಳೆ.

"ನೀನು ಹೋಗು ಅಂದ್ರು ಹೋಗುತೀನಿ
ನೀನು ಬ್ಯಾಡ ಅಂದ್ರು ಹೋಗುತೀನಿ
ಆಲಂಬಿಗೆರಿಗೆ" [ಅಪ್ರಕಟಿತ ಹಾಡು]

ಮಗಳ ನಿರ್ಧಾರ ತಿಳಿದ ಮ್ಯಾಲೆ ಯಾರು ತಡೆಯುವುದಿಲ್ಲ. ಹೀಗೆ ಅಪರೂಪಕೊಮ್ಮೆ ಹೆಣ್ಣು ತನಗೆ ಅನಿಸಿದ್ದನ್ನು ಮಾಡಿರುವ ದಾಖಲಿದೆ.

'ಉತ್ತರ ದೇವಿ' ಹಾಡಿನಲ್ಲಿ ಸೊಸೆಯ ಶೀಲವನ್ನು ಶಂಕಿಸಿದ ಅತ್ತೆ ಮನೆಯಿಂದ ಸೊಸೆಯನ್ನು ಹೊರ ಹಾಕಬೇಕೆಂದು ಪಟ್ಟುಹಿಡಿಯುತ್ತಾಳೆ. ಅತ್ತೆಯ ಹಟದಿಂದಾಗಿ ಆಕೆ ಮನೆ ಬಿಟ್ಟು ಹೊರಡುತ್ತಾಳೆ. ಆಕೆ ಮತ್ತು ಮಕ್ಕಳನ್ನು ತವರವರು ಸ್ವೀಕರಿಸಲು ನಿರಾಕರಿಸುತ್ತಾರೆ. ಇಂತಹ ಸಂದರ್ಭದಲ್ಲಿ ಗೆಳತಿ ಆಕೆಗೆ ತಂಗಲು ಅವಕಾಶ ನೀಡುತ್ತಾಳೆ. ಅವಳ ಬದುಕಿನ ನೆಲೆ ತೋರಿಸುತ್ತಾಳೆ. ಹೀಗೆ ಅಪರೂಪಕ್ಕೊಮ್ಮೆ ಅವಳ ಬದುಕು ಅವಳು ರೂಪಿಸಿಕೊಳ್ಳುವ ವಸ್ತುವೊಂದು ಜನಪದ ಸಾಹಿತ್ಯದಲ್ಲಿ ಕಾಣುತ್ತೇವೆ. ಉತ್ತರದೇವಿಯ ಸ್ವಾಭಿಮಾನ ಇಡೀ ಹಾಡಿನಲ್ಲಿ ಎದ್ದು ಕಾಣುತ್ತದೆ. ಮನೆ ಬಿಟ್ಟು ಹೋಗುವಾಗ ಒಡವೆ ವಸ್ತ್ರಗಳನ್ನು ತೆಗೆದುಕೊಂಡು ಹೋಗುವಂತೆ ಅತ್ತೆ ಹೇಳಿದರೆ. ಅದಕ್ಕೆ ಕನಿಷ್ಠ ಬೆಲೆಯೂ ಕೊಡದೆ. ಧೈರ್ಯ ಮತ್ತು ಆತ್ಮವಿಶ್ವಾಸದಿಂದಲೇ ಹೇಳುವ ಉತ್ತರ ಹೀಗಿದೆ.

ಪೆಟ್ಟಿಗೇಲಿರುವ ಪಟ್ಟೇಯ ಸೀರೆಯ
ಉಟ್ಟಾರ ಹೋಗೆ ಸೊಸೆ ಬಾಲೆ
ನೀನಾರ ಉಡೆ ಮಡಗ್ಯಾರ ಇರಿಸೆ ಅತ್ಯಮ್ಮ
ಹಾದಿ ಬೀದ್ಯೋರು ಕರೆದುಡಿಸೆ ಅತ್ಯಮ್ಮ
ನಾಳೆ ಬರುವೋಳಿಗೆ ಮಡುಗುಡಿಸೆ

[ಪು: 14, ಜನಪದ ಖಂಡಕಾವ್ಯ]

'ವಡ್ಡಗೆರೆ ನಾಗಮ್ಮ' ಕಥನ ಕಾವ್ಯದಲ್ಲಿ ನಾಗಮ್ಮ ಸಣ್ಣವಳಿರುವಾಗಲೇ ತಂದೆ ತಾಯಿ ಬಡವರಿಗೆ ಕೊಟ್ಟು ಮದುವೆ ಮಾಡುತ್ತಾರೆ. ಅತ್ತೆ, ಸೊಸೆ ಕೆಲಸ ಮಾಡಿ ಬದುಕುತ್ತಿರುತ್ತಾರೆ. ಇಂತಹ ಸಂದರ್ಭದಲ್ಲಿ ದಂಡಿಗೆ ಹೋದ ಗಂಡ ಸತ್ತ ಸುದ್ದಿ ತಿಳಿದು ಬರುತ್ತದೆ. ಗಂಡ ಸತ್ತ ಸುದ್ದಿಯಿಂದ ಬಹಳ ನಿರಾಶಳಾದ ಹೆಣ್ಣು ಕೊಂಡ ಹೋಗಲು ತೀರ್ಮಾನಿಸುತ್ತಾಳೆ. ತನ್ನ ಬದುಕಿಗೆ ಭದ್ರತೆಯನ್ನು ನೀಡದ ತವರಿನ ಬಗ್ಗೆ ಈಕೆಗೆ ಕೋಪವಿದೆ. ಹೆಣ್ಣನ್ನು ಹೆತ್ತು ಮದುವೆ ಮಾಡಿದರೆ ಜವಾಬ್ದಾರಿ ಮುಗಿಯಿತು ಎಂದು ತಿಳಿದ ಜನರಿಗೆ ವಡ್ಡಗೆರೆ ನಾಗಮ್ಮ ಒಬ್ಬ ಪ್ರತಿಭಟನಕಾರಳು. ಹೀಗೆ ಜವಾಬ್ದಾರಿಯಿಂದ ನುಣಚಿಕೊಂಡ ತವರಿಗೆ ಆಕೆ ಶಾಪ ಕೊಡುತ್ತಾಳೆ.

ತಿರಿದುಂಬು ಜೋಗಿಗೆ ನನ್ನ ಕೊಟ್ಟಿದ್ದಾರೆ
ತಿರುದುಂಡು ನಾನು ಇರುತಿದ್ದೆ
ವಡ್ಡಗೆರೆಂಬೋದು ದೊಡ್ಡ ಪಟ್ಟಣವೆಂದು
ಹತ್ತೆ ಹುಣಸೇಯ ನೆರಳೀಗೆ ನನ್ನೀಗ
ಕೊಂಡಾಕೆ ಧಾರೆ ಎರದವರೆ ನನ್ನ ತವರೋರು
ನನ್ನ ಕೊಟ್ಟೋರ ಮನೆಯೆ ಉರಿಯಾಲಿ ಬೇಯಾಲಿ
ನನ್ನ ಇಲ್ಲೀಗೆ ನಿಲಿಸ್ಯಾರೆ
ಕೊಂಡಾದ ತಾವ ತಾನು ಕೂತುಕೊಂಡು ನಾಗವ್ವ
ಕಂಡುಗ ದುಕ್ಕ ಮಾಡಿಕೊಂಡು ಅವಳೀಗ
ಬಾಸೆ ಕೊಡುತಾಳೆ ಆಗಿನ್ನು
ನನ್ನ ತವರೋರು ಹಾಳಾಗ್ಹೋಗಲಿ ಎಂದು

[ಪು : 84, ಬಯಲುಸೀಮೆ ಲಾವಣಿಗಳು]

ಹೆಣ್ಣಿಗೆ ಇರುವ ಅತಂತ್ರದ ಬದುಕು ಭದ್ರತೆಯಿಲ್ಲದ ಬಾಳು ಆಕೆಯನ್ನು ಹತಾಶೆಗೆ ನೂಕುತ್ತದೆ. ಪತಿವ್ರತೆ ಧರ್ಮಕ್ಕಿಂತ ಅವಳಿಗೆ ಮುಂದೆ ಎದುರಿಸುವ ಕಷ್ಟಗಳ ಬಗ್ಗೆ ಭಯವಿದ್ದಂತಿದೆ. ಇಂತಹ ಸಾಮಾಜಿಕ ಸಮಸ್ಯೆಗಳ ಕಡೆಗೆ ಗಾಯಕಿ ಲಕ್ಷ್ಯಹರಿಸಿರುವುದನ್ನು ಇಲ್ಲಿ ಕಾಣಬೇಕು. ಹೆಣ್ಣನ್ನು ಹಡೆದು ಅವಳಿಗೊಂದು ಮದುವೆಯಾದರೆ ಮುಗಿಯಿತು ಎಂದ ತಿಳಿದವರಿಗೆ ಅದರ ಜವಾಬ್ದಾರಿಯನ್ನು ಈ ಹಾಡು ತೋರಿಸುತ್ತದೆ. ಮದುವೆ ಮಾಡಿ ಕೈತೊಳೆದು ಕೊಟ್ಟರೆ ಸಾಕು ಎಂಬ ಆಲೋಚನೆಯನ್ನು ವಿಷಾದದಿಂದ ನೋಡಲಾಗಿದೆ.

ಹೀಗೆ ಜನಪದ ಸಾಹಿತ್ಯ ಜನರ ಆಶೋತ್ತರಗಳನ್ನು ತಿಳಿಸುತ್ತಲೂ ಅವರಲ್ಲಿರುವ ನ್ಯೂನ್ಯತೆಗಳನ್ನು ತೋರಿಸಿ ಕೊಟ್ಟಿದ್ದಾರೆ. ಹೆಣ್ಣು ಗಂಡಿನ ಮಧ್ಯೆ ಇರುವ ಭೇದದ ಅರಿವಿದೆ. ಆದರ ಬಗ್ಗೆ ಕೋಪವಿಲ್ಲ. ಅದನ್ನು ಅವರು ಹೆಣ್ಣಾಗಿ ಹುಟ್ಟಿರುವುದೇ ತಪ್ಪು ಎಂದು ಗ್ರಹಿಸುವುದರ ಮೂಲಕ ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿದ್ದಾರೆ. ಹೀಗೆ ಗ್ರಹಿಸಿದುದರ ಫಲವಾಗಿಯೇ ಅವರು ಪುರುಷ ಶ್ರೇಷ್ಠತೆಯನ್ನು ಪರೋಕ್ಷವಾಗಿ ಬಯಸುತ್ತಾರೆ ಎನಿಸುತ್ತದೆ. ಇದರಿಂದಾಗಿಯೇ ಹೆಣ್ಣು ಪುರುಷನಿರ್ಮಿತ ಮೌಲ್ಯ ವ್ಯವಸ್ಥೆಯನ್ನು ವಿರೋಧಿಸದೆಯೂ ತನ್ನತನದಲ್ಲಿಯೇ ದ್ವಂದ್ವತೆಯನ್ನು ರೂಪಿಸಿಕೊಳ್ಳುವಂತಾಗಿದೆ. 'ಹೆಣ್ಣುತನ' ಮತ್ತು ಮೌಲ್ಯವ್ಯವಸ್ಥೆಯಲ್ಲಿಯೇ ಇರುವ ತಪ್ಪುಗಳನ್ನು ಜನಪದ ಸ್ತ್ರೀ ಗುರುತಿಸದೇ ಹೋಗಿರುವುದನ್ನು ಗುರುತಿಸಬಹುದು. ಪಾರಂಪರಿಕ ಸ್ತ್ರೀ ರೂಪಕಗಳ ಕಡೆಗೆ ಅವರ ಬದುಕು ವಾಲಿರುವುದು ಸ್ಪಷ್ಟವಿದೆ. ಇದಕ್ಕೆ ಕಾಲದಿಂದ ಕಾಲಕ್ಕೆ ಆದ ಬದಲಾವಣೆಗಳ ಅರಿವು ಮತ್ತು ಓದಿನ ಅಭಾವವೇ ಮುಖ್ಯ ಕಾರಣವಾಗುತ್ತದೆ. ವಿದ್ಯಾಭ್ಯಾಸದ ಭಾಗ್ಯ ಇಂದಿಗೂ ಹಳ್ಳಿಯ ಬಹುಭಾಗದ ಹೆಣ್ಣುಮಕ್ಕಳಿಗೆ ತಲುಪುವುದು ಕಷ್ಟವಾಗಿದೆ. ತಲುಪಿದರೂ ಅದು ಪ್ರಾಥಮಿಕ ಹಂತದಲ್ಲಿ ನಿಂತುಹೋಗುವುದನ್ನು ಕಾಣಬಹುದು. ಇಂತಹ ಮಿತಿಗಳಲ್ಲೂ ಅವರು ಕೊಟ್ಟ ಸಾಹಿತ್ಯಕ್ಕೆ ಬಹಳ ಶಕ್ತಿ ಇದೆ. ಹೆಣ್ಣಿನ ನೋವನ್ನು ಕಾವ್ಯವಾಗಿಸಿದವರು ಜನಪದ ವರ್ಗ. ಅವರದೇ ಮಿತಿಗಳ ಮಧ್ಯೆಯೂ ಕೌಟುಂಬಿಕ ಸಮಸ್ಯೆಗಳನ್ನು ಕಾವ್ಯದಲ್ಲಿ ತಂದರು. ಪ್ರಧಾನ ವಸ್ತುವಾಗಿ ಹೆಣ್ಣಿನ ಕಷ್ಟಗಳ ಸರಮಾಲೆಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಇದು ಅಕ್ಷರ ಕಲಿತ ನಾರಿ ಕೊಡುವುದಕ್ಕಿಂತಲೂ ಬಹುದೊಡ್ಡ ಬೆಲೆಯುಳ್ಳದ್ದಾಗಿದೆ.

● ಡಾ॥ ಆರ್. ಸುನಂದಮ್ಮ

# ವಾಸಂತಿಬಾಯಿ ಪಡುಕೋಣೆ (1908 - 1995)

ಎಪ್ಪತ್ತರ ಅಂಚಿನಲ್ಲಿದ್ದ ಒಂದು ಹೆಣ್ಣು - ಹಣ್ಣು ಜೀವ ಆರ್ತವಾಗಿ ಪ್ರಾರ್ಥಿಸಿತು : 'ಭಗವಾನ್ ಈ ಜರ್ಜರಿತ ವಾದ ದೇಹವನ್ನು ಇತರರಿಗೆ ತೊಂದರೆಯಾಗದಂತೆ ನಿದ್ರಾವಶವಾಗಿದ್ದಾಗಲೇ ನಿನ್ನ ಬಳಿಗೆ ಕರೆಯಿಸಿಕೊಂಡು ಬಿಡು'. ದೇಹವಷ್ಟೇ ಅಲ್ಲಿ ಮನಸ್ಸು ಜರ್ಜರಿತವಾಗಿತ್ತು. ಏಳು ದಶಕಗಳ ಜೀವನ ಹೋರಾಟವನ್ನು ಆ ಜೀವ ಮಾಡಿತ್ತು. ಅವರ ಬದುಕಿನಲ್ಲಿ ಎದುರಾದ ಕಷ್ಟಗಳು ಒಂದೆರಡಲ್ಲ. ಬಡತನ, ಭವಿಷ್ಯದ ಅಸ್ಥಿರತೆ, ಪ್ರಾಣಾಂತಿಕ ಆಪತ್ತುಗಳು, ಜೀವಕ್ಕಂಟಿದ ಪ್ರಿಯಜೀವಗಳ ಸಾವು, ಸಾಮರಸ್ಯವಿಲ್ಲದ ಧಾಂಪತ್ಯ ಇತ್ಯಾದಿ. 'ಸಾಂಸಾರಿಕ ವಾಗಿ ಮನಸ್ಸು ಕೆಡುವ ಸಂದರ್ಭಗಳು ಜರುಗುತ್ತಲೇ ಇವೆ. ಒನಕೆಗೆ ತಲೆಕೊಟ್ಟ ನಂತರ ಅದರ ಪೆಟ್ಟು ತಿನ್ನ ದಿದ್ದರೆ ಆಗುತ್ತದೆಯೇ ?' ಈ ಮಧ್ಯೆಯೂ ಆ ಜೀವಕ್ಕೆ ಅಷ್ಟಿಷ್ಟು ನೆಮ್ಮದಿ ಸಿಕ್ಕಿದ್ದರೆ ಅದು ಕಲೆಗಳಿಂದ, ಭಾಷೆ-ಸಾಹಿತ್ಯಗಳಿಂದ. ಈ ಹೋರಾಟದ ಬದುಕು ಮತ್ತಾರದೂ ಅಲ್ಲ, 1-4-95 ರಂದು ತೀರಿಕೊಂಡ ಲೇಖಕಿ ವಾಸಂತಿಬಾಯಿ ಪಡುಕೋಣೆಯವರದು. ಒಂದು ದಶಕದ ಹಿಂದೆ, ಅದಕ್ಕೂ ಮುಂಚೆ ಎಷ್ಟೋ ಸಾರಿ ಬದುಕಿಗೆ ವಿದಾಯ ಹೇಳಲು ಅವರು ಪ್ರಯತ್ನಿಸಿದರೂ ಜೀವನ ಅವರನ್ನು 87 ವರ್ಷಗಳ ತನಕ ಹಿಡಿದಿಟ್ಟಿತ್ತು. ಮಕ್ಕಳ, ಮೊಮ್ಮಗನ ಸಾವಿನ ನೋವುಂಡು, ಅತಿ ಪ್ರಯಾಸದಲ್ಲಿ ಸಾರ್ಥಕ ರೀತಿಯಲ್ಲಿ ಸಂಸಾರದ ರಥ ಎಳೆದು ಸುಸ್ತಾದ, ತಮ್ಮ ಪ್ರತಿಭೆಗೆ ತಕ್ಕ ಪುರಸ್ಕಾರ ಪಡೆಯದ ಕೊನೆಗಾಲದ ಏಕಾಕಿತನದಲ್ಲಿ ತಮ್ಮ ಮುಂಬಯಿಯ ಮಾತುಂಗದ ಮನೆಯಲ್ಲಿ ಅವರು ಕೊನೆಯುಸಿರೆಳೆದರು.

ದಕ್ಷಿಣ ಕನ್ನಡ ಮೂಲದ ಈ ಲೇಖಕಿ 25-4-1908 ರಂದು ಬರ್ಮಾದ ಮಿಥಿಲದಲ್ಲಿ ಹುಟ್ಟಿದರು. ತಾಯಿ ರಾಧಾಬಾಯಿ, ತಂದೆ ಅಣ್ಣಾಜಿರಾವ್ ಬೈಂದೂರು. ಮಂಗಳೂರಿನಲ್ಲಿದ್ದ ಬುರ್ಜೆ ಮನೆತನದ ಬೈಂದೂರು ಮಂಗೇಶರಾಯರು ಮತ್ತು ಪಾರ್ವತಮ್ಮ ಬಯಸಿ ಬಯಸಿ ಪಡೆದ ಮಗು ಅಣ್ಣಾಜಿರಾವ್. ಈ ಅಣ್ಣಾಜಿ ರಾವ್ ಕೆಲಸದ ಮೇಲೆ ಬರ್ಮಾದಲ್ಲಿದ್ದಾಗ ರಾಧಾಬಾಯಿ ಅಣ್ಣಾಜಿರಾವ್ ಅವರ ಆರನೆಯ ಮಗುವಾಗಿ ವಾಸಂತಿ (ಮನೆಯ ಹೆಸರು ಶಾಂತಿ) ಹುಟ್ಟಿದರು. ವಾಸಂತಿಗೆ ಮೂರು ವರ್ಷಗಳಾಗಿದ್ದಾಗ ಕುಟುಂಬ ಮಂಗಳೂರಿಗೆ ಮರಳಿತು. ತಂದೆಯೆಂದರೆ ವಾಸಂತಿಗೆ ಅಚ್ಚುಮೆಚ್ಚು, ಸಲಿಗೆ. ಜೊತೆಯ ವ್ಯಾಪಾರಸ್ಥರು ಅಣ್ಣಾಜಿರಾವ್‌ಅವರ ಮೇಲೆ ಸುಳ್ಳು ಮೊಕದ್ದಮೆ ಹೂಡಿ ಅವರಿಗೆ ಆರು ತಿಂಗಳು ಜೈಲು ಶಿಕ್ಷೆ ಸಿಗುವಂತಾಯಿತು. ಸತ್ಯವಂತರಾದ ತಂದೆಗೆ ಅನ್ಯಾಯವಾಯಿತೆಂದು ಪುಟ್ಟ ವಾಸಂತಿಗೆ ತಿಳಿದರೂ ಹೊರಗಿನವರಿಂದ, ಶಾಲೆಯ ಸ್ನೇಹಿತರಿಂದ ಛೇಡಿಸಿಕೊಳ್ಳುವ ಹಿಂಸೆ ತಪ್ಪಲಿಲ್ಲ. ವಾಸಂತಿಯವರ ಬದುಕಿನ ಮೊದಲ ದೊಡ್ಡ ಆಘಾತ ಇದಾಯಿತು. ತಂದೆ ಯೇನೋ ನಾಲ್ಕೇ ತಿಂಗಳಿಗೆ ಜೈಲಿನಿಂದ ವಾಪಸ್ಸಾದರು, ಆದರೆ ಮನೆ ಮತ್ತೆ ಮೊದಲಿನಂತಾಗಲಿಲ್ಲ. ನೆಂಟರಿಷ್ಟರಲ್ಲಿ ಚದುರಿಹೋದ ಮಕ್ಕಳು, ಆರ್ಥಿಕ ದುಃಸ್ಥಿತಿ, ತಾಯಿ-ತಂದೆಯ ನಡುವೆ ವಿರಸ, ಸೋದರ-ಸೋದರಿಯರ ಸಾವು ಈ ವಿಪತ್ಸರಣಿಗಳ ನಡುವೆ ತಾಯಿಯ ಅಂಕೆಯಲ್ಲಿ, ಅವರಿವರ ಮನೆಯಲ್ಲಿ, ಒಳಗೊಳಗೇ ನೊಂದು ಬಾಲ್ಯ ವಲ್ಲದೆ ಬಾಲ್ಯವನ್ನು ವಾಸಂತಿ ಕಳೆದಳು. ನಿಂತು ನಿಂತು ಸಾಗಿದ ಓದು, ಸಂಗೀತ ಪಾಠಗಳು ಮದುವೆಯೊಂದಿಗೆ ಪೂರ್ತಿಯಾಗಿ ನಿಂತುಹೋದವು. ಹನ್ನೆರಡು ವರ್ಷದ ವಾಸಂತಿ ಗೃಹಿಣಿಯಾದಳು. ಪಡುಕೋಣೆ ಶಿವಶಂಕರ ರಾವ್ ಅವರೊಂದಿಗೆ ವಾಸಂತಿಯವರ ಮುಂದಿನ ಜೀವನದ ಏರಿಳಿತಗಳು ಸಾಗಿದವು.

ಎಳೆಯ ಹುಡುಗಿಯ ಬಗ್ಗೆ ಸರಿಯಾದ ತಿಳಿವಳಿಕೆ ಇಲ್ಲದ್ದರಿಂದ ಪತಿಯ ಸಂಶಯ, ಮುನಿಸು. ಇದರ ಪರಿಣಾಮವಾಗಿ ಅವರೇ ಹೇಳಿರುವಂತೆ 'ನನ್ನ ಜೀವನ ವೆಂದರೆ ಬರೇ ಕಟು ಅನುಭವವೂ ಪ್ರಾರಬ್ಧ ಕರ್ಮವೂ ಆಗಿಹೋಯಿತು.' ಗಂಡು-ಹೆಣ್ಣಿನ ಸಂಬಂಧದ ಬಗ್ಗೆ ಮುಗ್ಧಳಾದ, ಮಲೇರಿಯಾದಿಂದ ನರಳುತ್ತಿರುವ ಎಳೆಯ ಹುಡುಗಿ, ಸದಾ ಸರಸ ಸಲ್ಲಾಪವನ್ನಪೇಕ್ಷಿಸುವ ಪತಿ. ಪತಿಯ ಹತಾಶೆ ಸಿಟ್ಟಿಗೆ ತಿರುಗುತ್ತಿತ್ತು — ಹೀಗೆ

ವೈವಾಹಿಕ ಜೀವನವೆಂಬುದು ಆ ಹೊತ್ತಿಗೆ, ಆ ಹುಡುಗಿಗೆ ದಿಗಿಲು ತಂದಿತು : 'ಸಾಯಂಕಾಲವಾಗುತ್ತಾ ಬಂತೆಂದರೆ ನಾನು ಹೆದರಿಕೆಯಿಂದ ನಡುಗುತ್ತಿದ್ದೆನು' ಈ ಅವಸ್ಥೆಯಲ್ಲಿ ಹುಡುಗಿ ಆತ್ಮಹತ್ಯೆಗಾಗಿಯೂ ಯತ್ನಿಸಿದಳು. ಮುಂದೆ ಸ್ವಂತ ಮನೆಯ ಹೊಸ ಬದುಕು ಪ್ರಾರಂಭವಾಯಿತು. ಆದರೆ ಒಂದು ಕಡೆ ನೆಲೆಯಾಗಿ ನಿಲ್ಲುವ ಬುದ್ಧಿ ಗಂಡನದಲ್ಲ. ಸಿಕ್ಕಿದ ಕೆಲಸಗಳನ್ನು ಬಿಟ್ಟು ಸಂಸಾರವನ್ನು ಆತಂಕದಲ್ಲಿ, ಬಡತನದಲ್ಲಿ ಸಿಕ್ಕಿಸುತ್ತಿದ್ದರು. ಪಣಂಬೂರಿನಿಂದ ಕಲ್ಕತ್ತೆಯವರೆಗಿನ ಜೀವನದಲ್ಲಿ ಹಲವು ಏತ್ತಂಗಡಿಗಳು, ಹಲವು ಬಾರಿ ಆತಂಕಗಳು. 'ನಿರುದ್ಯೋಗದ ಕತ್ತಿಯಂತೂ ತಲೆಯ ಮೇಲೆ ಸದಾ ತೂಗುತ್ತಿತ್ತು'.

ವಾಸಂತಿಯವರ ಬದುಕಿನ ಸಂತಸ, ಹೆಮ್ಮೆಯೂ ಮಕ್ಕಳೇ, ದುಃಖ, ಆತಂಕಗಳೂ ಮಕ್ಕಳೇ. ಮೊದಲ ಮತ್ತು ಮೆಚ್ಚಿನ ಮಗ ಗುರುದತ್ತ ನಟನಾಗಿ, ನಿರ್ದೇಶಕನಾಗಿ ಪ್ರಸಿದ್ಧನಾದವನು. ಈತನನ್ನೂ ಉಳಿದ ಕೆಲವು ಮಕ್ಕಳನ್ನೂ ಕಳೆದುಕೊಂಡ ವಾಸಂತಿಯವರ ನೋವು 'ನನ್ನ ಮಗ ಗುರುದತ್ತ' ಹಾಗೂ 'ಜೀವನ ಹೋರಾಟ' ದಲ್ಲಿ ಉಕ್ಕಿ ಬಂದಿದೆ.

ಸಂಗೀತ, ನಾಟ್ಯ, ಚಿತ್ರ, ಭಾಷಾಕಲಿಕೆ ಮೊದಲಾದವುಗಳಲ್ಲಿ ವಾಸಂತಿಯವರಿಗೆ ಮೊದಲಿನಿಂದಲೂ ಹುಚ್ಚು. ಚಿತ್ರ, ಸಂಗೀತಗಳನ್ನು ಬಲ್ಲವರು ಮನೆಯಲ್ಲಿದ್ದರೆ ಅವರೊಡನೆ ಚರ್ಚಿಸುತ್ತಿದ್ದರು, ಕಲಿಯುತ್ತಿದ್ದರು. ಇದರಿಂದಾಗಿ ಗಂಡನ ಸಿಟ್ಟು, ಸಂಶಯಗಳನ್ನು ಎದುರಿಸುತ್ತಿದ್ದರು. ಮನೆಯೆದುರು ಯಕ್ಷಗಾನ ನಡೆಯುತ್ತಿದ್ದರೂ ನೋಡುವ ಆಸೆ ತುಂಬಿ ತುಳುಕುತ್ತಿದ್ದರೂ. ಕಿಟಕಿಯಿಂದಲೇ ಕಂಡು ಸಮಾಧಾನ ಪಟ್ಟುಕೊಳ್ಳಬೇಕಾಗಿತ್ತು. ಉದಯಶಂಕರರ ನಾಟ್ಯವೇ ಇರಲಿ, ಬಿ.ವಿ. ಕಾರಂತರ ನಾಟಕವೇ ಇರಲಿ, ಚಂದ್ರಭಾಗದೇವಿಯವರ ನೃತ್ಯವೇ ಇರಲಿ - ಇವನ್ನೆಲ್ಲ ಅನುಭವಿಸಿ, ಆನಂದಿಸುವ ಶಕ್ತಿ, ಕಲಾರಾಧನೆ ಅವರಲ್ಲಿತ್ತು. ಜನರ ಟೀಕೆಗಳನ್ನು ಎದುರಿಸಿಯೂ ಮಗ ಗುರುದತ್ತನನ್ನು ನಾಟ್ಯಕಲಿಕೆಗೆ ಉದಯಶಂಕರರಲ್ಲಿಗೆ ಕಳಿಸಲು ಈ ಕಲಾಸಕ್ತಿಯೇ ಮೂಲ ಕಾರಣ.

ವಾಸಂತಿಯವರಿಗೆ ದೇವರಲ್ಲಿ ಬಲವಾದ ನಂಬಿಕೆ. ಆ ನಂಬಿಕೆಯಿಂದಲೇ ಅವರು ಜೀವನವನ್ನು ಈಸಿದ್ದರು. ಬದುಕಿನ ಸಂಜೆಯಲ್ಲಿ ಸಾಯಿಬಾಬಾ ಬಗ್ಗೆ ಅವರಿಗೆ ಶ್ರದ್ಧೆ ಬೆಳೆದಿತ್ತು. ಆದರೆ ಅವರದು ತೋರಿಕೆಯ ಶ್ರದ್ಧೆಯಾಗಿರಲಿಲ್ಲ. ಬಾಬಾ ಅವರ ದರ್ಶನದಲ್ಲಾಗಲೀ, ಬಾಬಾಭಕ್ತಿಯ ಪ್ರದರ್ಶನದಲ್ಲಾಗಲೀ ಅವರು ಆಸಕ್ತಿ ತಾಳಲಿಲ್ಲ. ಧಾರ್ಮಿಕ ನಂಬಿಕೆ ಕಷ್ಟದ ಸಮಯಗಳಲ್ಲಿ ಅವರಿಗೆ ಬಲ ಕೊಡುತ್ತಿತ್ತು. 'ಇವರ ಕೆಲಸ ಹೋದ ಸಂಗತಿಯನ್ನು ಕೇಳಿ ನನಗೆ ದಿಕ್ಕುತೋಚದಂತಾಯಿತು. ಈ ಸಂಸಾರವೇ ಬೇಡವೆನಿಸುವಷ್ಟು ನಿರಾಶೆಯಿಂದ ಬಳಲಿದೆ. ನನ್ನನ್ನು ಕೇಳುವವರು ಯಾರೂ ಇರಲಿಲ್ಲ. ಇದ್ದವನು ನಮ್ಮ ಪಾಲಿಗೆ ಪರಮಾತ್ಮನೊಬ್ಬನೇ! ಸದಾ ಆತನನ್ನು ಸ್ಮರಿಸುತ್ತಾ ಕಾಲ ಕಳೆಯುತ್ತಿದ್ದೆನು'. ವಾಸಂತಿಯವರ ಧಾರ್ಮಿಕತೆಗೆ ಧರ್ಮದ ಸಂಕುಚಿತ ಆಯಾಮವಿರಲಿಲ್ಲ. ಅವರೇ ಹೇಳಿರುವಂತ 'ಯಾವಾಗಲೂ ಏನಾದರೂ ತಾಪತ್ರಯ ಬಂದಾಗ ಮಾಹಿಮ್ ಚರ್ಚಿಗೆ ಹೋಗಿ 9 ಬುಧವಾರ ಮೇಣದ ಬತ್ತಿಗಳನ್ನು ಉರಿಸುತ್ತಿದ್ದೆನು'. ಅವರು ಗಂಡನನ್ನು ಕಳೆದುಕೊಂಡಾಗ ಮಕ್ಕಳಿಗೆ ಸ್ಪಷ್ಟವಾಗಿ ಹೇಳಿದರು : 'ನನಗೆ ಬಿಳೀಸೀರೆ ಉಟ್ಕೊಳ್ಳೋದು, ಬರಿ ಹಣೇಲಿರೋದು ಇಷ್ಟ ಇಲ್ಲ, ನಾನು ಹೇಗೆ ಇದ್ದನೋ ಹಾಗೇ ಇರ್‍ತೀನಿ'.

ವಾಸಂತಿಯವರು ನಿತ್ಯ ಕುತೂಹಲಿಯಾಗಿದ್ದರು. ಭಾಷೆ, ಕಲೆಗಳಲ್ಲಷ್ಟೇ ಅಲ್ಲದೆ ಜೀವನದ ಹಲವು ಸಾಮಾನ್ಯ ಸಂಗತಿಗಳಲ್ಲೂ ಆಕೆಗೆ ಇಳಿವಯಸ್ಸಿನಲ್ಲೂ ಕುತೂಹಲ; ತಮ್ಮ ಅರವತ್ತೆರಡನೆಯ ವಯಸ್ಸಿನಲ್ಲಿ ಜಪಾನ್‌ಗೆ ಹೋಗಿಬಂದರು. ಮೊದಲ ದರ್ಜೆಯ ರೈಲಿನ ಅನುಭವ ಹೇಗಿದ್ದೀತು ? ಡಾರ್ಜಿಲಿಂಗ್ - ಕಾಶ್ಮೀರಗಳು ಹೇಗಿದ್ದಾವು ? ನಲವತ್ತೆಂಟು ವರ್ಷಗಳ ನಂತರ ಬೆಂಗಳೂರು ಹೇಗಿದೆ ? ಇಂಥ ಎಷ್ಟೋ ಕುತೂಹಲವನ್ನು ಕಷ್ಟಗಳಿದ್ದರೂ ತಣಿಸಿಕೊಳ್ಳುತ್ತಿದ್ದರು. 1976ರಲ್ಲಿ ವಾಸಂತಿಯವರು ಕರ್ನಾಟಕಕ್ಕೆ ಬಂದಾಗ ಅನೇಕ ಲೇಖಕ-ಲೇಖಕಿಯರನ್ನು ಸಂದರ್ಶಿಸಿದರು. ಕಿರಿಯ ಲೇಖಕಿಯರನ್ನು ಕಾಣಲು ಹಿಂಜರಿದ ಅವರು ಹೀಗೆಂದಿದ್ದಾರೆ : 'ಈಗ ಅನೇಕ ಯುವ ಲೇಖಕಿಯರಿರುವರು. ಅವರೆಲ್ಲರನ್ನೂ ನಾನು ನೋಡ ಬಯಸಲಿಲ್ಲ, ನನ್ನಂತಹ ಹಣ್ಣಾದವರನ್ನು ಅವರು ಯಾವ ದೃಷ್ಟಿಯಿಂದ ಕಾಣುವರೋ ಏನೋ, ನನ್ನ ಅತಿಶಯ ಮೃದುವಾದ ಮನಸ್ಸಿಗೆ ಪರರ ನಿಂದೆ, ತಾತ್ಸಾರವನ್ನು ಸಹಿಸುವ ಶಕ್ತಿ ಇಲ್ಲ'. ಹಳೆಯ ಲೇಖಕಿ

ಯರ ಬಗ್ಗೆ, ಅವರ ಅನುಭವ - ಬರಹಗಳ ಬಗ್ಗೆ ನಮಗೆ ಎಂಥ ಆದರ, ಕುತೂಹಲಗಳಿವೆ ಎಂಬುದನ್ನು ಅವರಿಗೆ ತಿಳಿಸುವ ಅವಕಾಶ ಸಿಕ್ಕಿದ್ದರೆ ಎಂದು ಈಗ ಪರಿತಾಪ ಉಂಟಾಗುತ್ತದೆ. ಹೀಗೇ ಎಷ್ಟೋ ಭಾವನೆಗಳು, ಎಷ್ಟೋ ಮಾತುಗಳು ಯಾರಿಗೆ ತಲುಪಬೇಕೋ ಅವರಿಗೆ ತಲುಪಿಸಲಾಗುವುದೇ ಇಲ್ಲ. ಆದರಲ್ಲೂ ಶಾಶ್ವತವಾಗಿ ಕಾಲ ದೂರಸರಿಸಿದ ಮೇಲೆ ನಾವು ಮಾಡುವುದೇನಿದೆ ?

ವಾಸಂತಿಯವರ ವಿಚಾರವಂತಿಕೆ ಜೀವನದುದ್ದಕ್ಕೂ ಅಂಧಶ್ರದ್ಧೆಗಳನ್ನು ಪ್ರಶ್ನಿಸುತ್ತಲೇ ಇತ್ತು. 1976ರಲ್ಲಿ ಅವರು ಉಡುಪಿಗೆ ಬಂದಾಗ ಒಂದು ಸಂದರ್ಭದಲ್ಲಿ ಅವರು ಹೀಗೆ ಪ್ರತಿಕ್ರಿಯಿಸಿದ್ದಾರೆ : 'ಈ ದೇವಸ್ಥಾನದಲ್ಲಿ ಈಗಲೂ ಧರ್ಮಾರ್ಥ ಊಟದ ವ್ಯವಸ್ಥೆ ಇದೆ. ನೂರಾರು ಜನ ಊಟ ಮಾಡುವರಂತೆ, ನನಗೆ ಆಶ್ಚರ್ಯವಾಯಿತು. ಈ ಕಠಿಣ ದಿನಗಳಲ್ಲಿ ಇಂತಹ ದಾನ ಧರ್ಮವೇ ? ಇದರಿಂದ ಜನರಲ್ಲಿ ಆಲಸ್ಯ ಮತ್ತು ಬೇಜವಾಬ್ದಾರಿಯು ಹೆಚ್ಚುತ್ತದಲ್ಲವೇ ?'. ಇನ್ನೊಂದು ಸಂದರ್ಭದಲ್ಲಿ ತಾವಿದ್ದ ಆಶ್ರಮದ ಬಗ್ಗೆ ಹೇಳುವಾಗ ಹೀಗೆಂದಿದ್ದಾರೆ : 'ಭಕ್ತಮಂಡಳಿಯವರು ಮಾತಾಜಿಯವರ ಮತ್ತು ರಾಮದಾಸರ ಕಾಲಮೇಲೆ ಹಗಲಿರುಳು ನೂರಾರು ಸಲ ಬಿದ್ದು ನಮಸ್ಕಾರ ಮಾಡುತ್ತಿದ್ದರು. ಅವರಿಬ್ಬರ ಎಂಜಲು ತಿನ್ನಲಿಕ್ಕಾಗಿ ಘಂಟೆಗಟ್ಟಳೆ ಕಾಯುತ್ತಿದ್ದರು. ನನಗೆ ಇದೆಲ್ಲಾ ಆಗುತ್ತಿರಲಿಲ್ಲ'.

ಸುಮಾರು ಹನ್ನೆರಡು, ಹದಿಮೂರು ವರ್ಷಗಳ ವೈವಾಹಿಕ ಜೀವನದ ಸಂಕಷ್ಟ, ಬಡತನಗಳು ವಾಸಂತಿಯವರಿಗೆ ಒಂದು ದೊಡ್ಡ ಪಾಠ ಕಲಿಸಿತ್ತು. ಅದೆಂದರೆ ತಾನೇ ದುಡಿಯದಿದ್ದರೆ ತನ್ನ ಸಂಸಾರ ಸರಿಹೋಗಲಾಗದು ಎಂಬುದು. ಹೊರದುಡಿಮೆಗೇ ವಾಸಂತಿ ಧುಮುಕಿದರು. ಐದು ರೂಪಾಯಿ ದೊರಕುವ ಮನೆ ಪಾಠದಿಂದ ಅವರ ಉದ್ಯೋಗಪರ್ವ ಪ್ರಾರಂಭವಾಯಿತು. ಉದ್ಯೋಗಕ್ಕೆ ಬೇಕಾದ ಶಿಕ್ಷಣ ಮುಗಿಸಲು ಅಡ್ಡಿಗಳೇ ಹೆಚ್ಚು. ಅಂತೂ ಕೊನೆಗೆ ಸತತ ಹೋರಾಟದ ನಡುವೆ ಮೆಟ್ರಿಕ್‌ನಲ್ಲಿ ತೇರ್ಗಡೆಯಾದರು, ಹಿಂದಿಯಲ್ಲಿ ಕೋವಿದೆಯಾದರು, ಶಿಕ್ಷಕಿಯಾದರು. ಶಾಲೆಯ ಕೆಲಸ ಮುಗಿದ ಮೇಲೆ ಮನೆಪಾಠ, ಮನೆಯಲ್ಲಿ ಐವರು ಮಕ್ಕಳ ಕೆಲಸ, ರಾತ್ರಿ ಮನೆಗೆಲಸ ಮುಗಿದ ಮೇಲೆ ವಾಲ್ಟರ್ ಥಾಮ್ಸನ್ ಕಂಪೆನಿಯವರ ಭಾಷಾಂತರದ ಕೆಲಸ. ಹೀಗೆ ದಿನವೆಂದರೆ ಕೆಲಸದ ನಂತರ ಕೆಲಸ. ಇಳಿವಯಸ್ಸಿನಲ್ಲೂ ಜೀವನನಿರ್ವಹಣೆಗಾಗಿಯಲ್ಲದಿದ್ದರೂ ತಮ್ಮ ಉದ್ಯಮಶೀಲ ಸ್ವಭಾವದಿಂದಾಗಿ ಅವರು ಸುಮ್ಮನೆ ಕುಳಿತಿರಲಾರರು. ಉಮಾದೇವಿಯವರು 24-5-95ರ ಲಂಕೇಶ್ ಪತ್ರಿಕೆಯಲ್ಲಿ ಹೇಳಿರುವಂತೆ ತಮ್ಮ ಕೊನೆಯ ದಿನಗಳಲ್ಲಿ ವಾಸಂತಿಯವರು ಸುತ್ತಮುತ್ತಲಿನ ಜೋಪಡಿಗಳ ಮಕ್ಕಳಿಗೆ ಪಾಠ-ಹಾಡು ಕಲಿಸುತ್ತಿದ್ದರು. ಮನೆಯಲ್ಲಿ ಸಹಾಯಕ್ಕಿದ್ದ ಮಂಜುಳಾಗೆ ಇಂಗ್ಲಿಷ್ ಕಲಿಸುತ್ತಿದ್ದರು. ವಾಸಂತಿಯವರು ಕಷ್ಟಸಹಿಷ್ಣು. ಮಹಾಯುದ್ಧದ ಸಮಯದಲ್ಲಿ ಹೆದರಿ ಕಲ್ಕತ್ತಾದಿಂದ ಮುಂಬಯಿಗೆ ಹಿಂದಿರುಗುವಾಗ ತುಂಬಿದ್ದ ರೈಲಿನಲ್ಲಿ ಮಕ್ಕಳೊಡನೆ ಅವರು ಎರಡು ದಿನ ನಿಂತೇ ಪ್ರಯಾಣ ಮಾಡಿದರು.

ಆ ಕಾಲದ ಹಲವರಂತೆ ವಾಸಂತಿ ಮತ್ತು ಅವರ ಪತಿಯೂ ಗಾಂಧೀಜಿಯವರ ಮೋಡಿಗೆ ಒಳಗಾಗಿದ್ದರು. ಕೆಲವು ಸಾರಿ ಅವರನ್ನು ಭೇಟಿಯಾಗಿದ್ದರು, ಅವರೊಡನೆ ಪತ್ರವ್ಯವಹಾರ ನಡೆಸಿದ್ದರು. ಗಾಂಧೀಜಿಯವರ ಪತ್ರಕ್ಕೆ ಕಟ್ಟುಹಾಕಿಸಿ ದೇವರಮನೆಯಲ್ಲಿ ಇಟ್ಟಿದ್ದರೆಂಬ ಅಂಶ ವಾಸಂತಿಯವರ ಗಾಂಧೀಜಿಯವರ ಮೇಲಿನ ಶ್ರದ್ಧೆ, ಭಕ್ತಿಗಳನ್ನು ಸೂಚಿಸುತ್ತದೆ. ಗಾಂಧೀಜಿ ಮತ್ತು ಅವರ ಸಹಚರರೊಡನೆ ಇದ್ದು ಹತ್ತಿ ಶುದ್ಧಿಮಾಡುವುದು, ನೂಲು ತೆಗೆಯುವುದು ಮೊದಲಾದ ಕೆಲಸಗಳನ್ನು ಕಲಿತಿದ್ದರು. ಗಾಂಧೀಜಿಯವರ ಆಶ್ರಮವನ್ನು ಸೇರುವ ಬಯಕೆಯೂ ಅವರಿಗಿತ್ತು. 'ಆಶ್ರಮ ಸೇರದಿದ್ದರೂ ಪವಿತ್ರ ಜೀವನವನ್ನು ಸಾಗಿಸಿ, ಸಂಸಾರ ಧರ್ಮ ಪಾಲನೆ ಮಾಡು' ಎಂಬ ಗಾಂಧೀಜಿಯವರ ಬೋಧೆ ವಾಸಂತಿಯವರನ್ನು ಸಂಸಾರದಲ್ಲೇ ಉಳಿಸಿತು. ಆ ಗಾಂಧೀಯುಗದಲ್ಲಿ ಅವರ ಇತರ ಹಲವು ಬಂಧುಗಳೂ ಗಾಂಧೀ ಮಾರ್ಗಿಗಳಾಗಿದ್ದುದರಿಂದ ವಾಸಂತಿಯವರ ಗಾಂಧೀ ಶ್ರದ್ಧೆ ಆ ವಾತಾವರಣದ ಪೋಷಣೆಯನ್ನೂ ಪಡೆದಿತ್ತು.

ಅನುವಾದಕಿಯಾಗಿ, ಆತ್ಮಚರಿತ್ರೆಯ ಬರಹಗಾರ್ತಿಯಾಗಿ, ಕಥೆಗಾರ್ತಿಯಾಗಿ ವಾಸಂತಿಯವರು ಹಲವು ದಶಕಗಳಲ್ಲಿ ನಿರಂತರವಾಗಿಯಲ್ಲದಿದ್ದರೂ ಆಗಾಗ ಬರೆಯುತ್ತಾ ಬಂದವರು. 1928ರ ಸುಮಾರಿಗೆ ವಾಸಂತಿಯವರ ಪತಿ ಕೆಲವು ಕಾಲ 'ರಾಷ್ಟ್ರಬಂಧು' ಪತ್ರಿಕೆಯ ಉಪಸಂಪಾದಕರಾಗಿದ್ದರು. ಕಡಂಗೋಡ್ಲು

ಶಂಕರರಾಯರು ಅದರ ಸಂಪಾದಕರು. ಆಗ ವಾಸಂತಿ ಯವರೂ ಪತ್ರಿಕೆಗೆ ತಪ್ಪದೆ ಬರೆಯುತ್ತಿದ್ದರು. ಆದರೆ ಮನೆಯವರಿಗೆ ಕೂಡ ಈಕೆ ಲೇಖಕಿಯೆಂಬುದನ್ನು ನಂಬ ಲಾಗುತ್ತಿರಲಿಲ್ಲ. ಇದಕ್ಕೆ ಸಂಬಂಧಿಸಿದ ಒಂದು ಘಟನೆ ಯನ್ನು ತಮ್ಮ ಆತ್ಮಕಥಾನಕದಲ್ಲಿ ವಾಸಂತಿ ನಿರೂಪಿಸಿ ದ್ದಾರೆ. 'ಒಂದು ದಿನ ಅಣ್ಣನವರು ನನ್ನ ಕೂಡ ಕುತರ್ಕ ಮಾಡಲಾರಂಭಿಸಿದರು. 'ನೀನು ಕಥೆಗಳನ್ನು ಸ್ವತಃ ಬರೆಯುವುದಿಲ್ಲ. ನಿನ್ನ ಯಜಮಾನರು ಬರೆದು ನಿನ್ನ ಹೆಸರಿನಲ್ಲಿ ಕಳುಹಿಸುತ್ತಿದ್ದಾರೆ' ಎಂದರು. ನನಗೆ ರೇಗಿತು. ನನ್ನ ಸ್ವಭಾವಕ್ಕೆ ಅದು ಮುಳ್ಳಿನಂತೆ ಚುಚ್ಚಿತು. ನಾನು ಅಂದೇ ಲೇಖನಿ ತೆಗೆದುಕೊಂಡೆ. ನನಗೆ ಬರು ತ್ತಿದ್ದ ಅಲ್ಪ ಹಿಂದಿಯಲ್ಲಿ ಒಂದು ಕಥೆಯನ್ನು ಅವರೆದುರಿಗೆ ಬರೆದು ತೋರಿಸಿದೆನು.'

ವಾಸಂತಿಯವರು ಬಂಗಾಲಿ, ಹಿಂದಿ, ಇಂಗ್ಲೀಷ್, ಗುಜರಾತಿ, ಕೊಂಕಣಿ ಮತ್ತು ಮರಾಠಿ ಭಾಷೆಗಳಲ್ಲಿ ಹಿಡಿತ ಸಾಧಿಸಿದ್ದರು. ಅಂತೆಯೇ ಅವರು ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಅನುವಾದಿಸು ತ್ತಿದ್ದರು ಹಾಗೂ ಅವರ ಸ್ವಂತ ಬರಹಗಳನ್ನು ಕನ್ನಡವೇ ಅಲ್ಲದೆ ಬೇರೆ ಭಾಷೆಗಳಲ್ಲೂ ಬರೆಯುತ್ತಿದ್ದರು. ಈಚೆಗೆ ಒಂದು ಸಂದರ್ಶನ ಲೇಖನದಲ್ಲಿ ಅವರ ಮಗಳು ಲಲಿತಾ ಲಾಜ್ಮಿ ನೆನೆದಿರುವಂತೆ ಅವರು ಹಿಂದಿ ಚಲನಚಿತ್ರಗಳಿಗೆ ಸ್ಕ್ರಿಪ್ಟ್‌ಗಳನ್ನು ಬರೆಯುತ್ತಿದ್ದರು. ಅವರ ದಿನಚರಿ ಇಂಗ್ಲಿಷ್‌ನಲ್ಲಿರುತ್ತಿತ್ತು. ಎಂ. ಕೆ. ಇಂದಿರಾ ಅವರ 'ನಾಗವೇಣಿ' ಕಾದಂಬರಿಯನ್ನು ಹಿಂದಿಗೆ ಅನುವಾದಿ ಸಿದ್ದರು. 'ಮಿಥುನ ಲಗ್ನ', 'ಆಸೆಯ ಕಣ್ಣು', 'ಕರ್ಮಚಾರಿ' (?) ಮೊದಲಾದವು ಅವರು ಕನ್ನಡಕ್ಕೆ ಅನುವಾದಿಸಿರುವ ಕಾದಂಬರಿಗಳು. ಕೊಂಕಣಿಗೂ ತಾವು ಅನುವಾದಿಸಿರುವುದಾಗಿ ತಮ್ಮ ಜೀವನಚರಿತ್ರೆಯಲ್ಲಿ ವಾಸಂತಿ ಹೇಳಿಕೊಂಡಿದ್ದಾರೆ. ಅವರ ಒಟ್ಟು ಬರವಣಿಗೆ ಎಷ್ಟು, ಏನು ಎಂಬುದರ ಬಗ್ಗೆ ಕೆಲಸ ನಡೆದು ಸ್ಪಷ್ಟ ಚಿತ್ರ ಮೂಡಬೇಕಾಗಿದೆ.

ವಾಸಂತಿಯವರು ಎರಡು ಆತ್ಮ ಕಥಾನಕಗಳನ್ನು ಬರೆದಿದ್ದಾರೆ. ಅವು 'ಜೀವನದ ಹೋರಾಟ' ಮತ್ತು 'ನನ್ನ ಮಗ ಗುರುದತ್ತ'. ಕನ್ನಡ ಲೇಖಕಿಯರ ಆತ್ಮ ಚರಿತ್ರೆಗಳಲ್ಲೇ ವಾಸಂತಿಯವರ 'ಜೀವನದ ಹೋರಾಟ' ಹೆಚ್ಚು ಮುಕ್ತವಾದದ್ದು. ಅತ್ಯಂತ ಸೂಕ್ಷ್ಮವಾದ ಕೌಟುಂಬಿಕ ಸಂಬಂಧಗಳ ಬಗ್ಗೆ ಬರೆಯುವಾಗ ಕೂಡ ತನ್ನ ನೋವು, ನಲಿವುಗಳನ್ನು ಬಿಚ್ಚಿಟ್ಟಿದ್ದಾರೆ. 'ನಮ್ಮ ಮಾತುಂಗದ ಮನೆಯನ್ನು ಬಿಟ್ಟು ಬಾಂದ್ರಾಗೆ ಹೋದಾರಭ್ಯ ನಾನು ತಿರುಕಳಂತಾಗಿದ್ದೇನೆ.' 'ಇತ್ತ ಮನೆಯಲ್ಲಿ ದೇವಿದಾಸನು ಸರಿಯಾಗಿ ಖರ್ಚಿಗೆ ಹಣ ಕೊಡುತ್ತಿರಲಿಲ್ಲ, ನನ್ನನ್ನು ಹೀನವಾಗಿ ಗಂಡ ಹೆಂಡತಿ ಕಾಣುತ್ತಿದ್ದರು.' 'ಐದನೇ ಬಾರಿ ನಾನು ಗರ್ಭಿಣಿ ಯಾದೆ. ನಾನಾದರೋ ಜೀವನದ ಜಂಜಾಟಕ್ಕೆ ಎಂದೋ ಬೇಸತ್ತಿದ್ದೆನು. ಪ್ರತಿಸಲ ಸಿಕ್ಕಿದ ಔಷಧ ಗಳನ್ನೋ, ಅಯೋಗ್ಯವಾದ ವಸ್ತುಗಳನ್ನೋ ಗರ್ಭಪಾತ ವಾಗಬೇಕೆಂದು ನುಂಗುತ್ತಿದ್ದರೂ ಏನೂ ಪ್ರಯೋಜನ ವಾಗಲಿಲ್ಲ. ಪ್ರತಿಯೊಂದು ಸಲವೂ ಏನೇ ಮಾಡಿದರೂ ಮುದ್ದಾದ ಮಗುವಿನ ತಾಯಾಗುತ್ತಿದ್ದೆ.' ಪತಿಯ ಸಾವಿನ ನಂತರದ ಸಂದರ್ಭವನ್ನು ಕುರಿತು ವಾಸಂತಿ ಹೀಗೆ ಬರೆಯುತ್ತಾರೆ : 'ನಮ್ಮ ದಾಂಪತ್ಯ ಜೀವನದಲ್ಲಿ ಒಗ್ಗಟ್ಟಿರಲಿಲ್ಲ. ನಾವು ಒಬ್ಬರನ್ನೊಬ್ಬರು ಎಂದೂ ತಿಳಿದುಕೊಳ್ಳುವ ಪ್ರಯತ್ನ ಮಾಡಲಿಲ್ಲ. ನಮ್ಮಿಬ್ಬರ ಸ್ವಭಾವಕ್ಕೆ ಅಜ-ಗಜದಷ್ಟು ವ್ಯತ್ಯಾಸವಿತ್ತು. ಆದರೆ ನಾನು ಸನಾತನ ಧರ್ಮಕ್ಕೆ ಶರಣುಹೋದವಳು. ಕೈ ಹಿಡಿದ ಪತಿ ಎಂತಹವನೇ ಆಗಲಿ ಆತನಿಂದಲೇ ಪತ್ನಿಗೆ ಸಮಾಜದಲ್ಲಿ ಗೌರವ, ಮಾನ, ಮರ್ಯಾದೆ. ನಮ್ಮಲ್ಲಿ ಅನ್ಯೋನ್ಯತೆ ಇಲ್ಲದಿದ್ದರೂ ಮದುವೆಯಾದಂದಿಂದ 41 ವರ್ಷ ನಾವಿಬ್ಬರು ಒಟ್ಟಿಗೆ ದಾಂಪತ್ಯ ಜೀವನ ನಡೆಸಿರ ಲಿಲ್ಲವೆ ? ಈ ಜನ್ಮದ ಸುಖ-ದುಃಖ, ಬಡತನ, ಶ್ರೀಮಂತತನ ನಾನಾ ರೂಪದಲ್ಲಿ ಬಂದ ಅನುಭವ ಗಳನ್ನು ಮರೆಯಲಾಗುತ್ತದೆಯೇ ? ನಾನಾದರೋ ದೀರ್ಘಕಾಲದಿಂದಲೂ ಸಾವಿಗಾಗಿ ಕಾದು ಕುಳಿತವಳು. ಅವರು ಬದುಕಿನ ಬಾಳಿಗೆ ಹಂಬಲಿಸುತ್ತಿದ್ದರು. ಸಂಸಾರದ ತಾಪತ್ರಯ, ನೆಚ್ಚು ಮುಚ್ಚು ಯಾವುದನ್ನೂ ಹಚ್ಚಿಕೊಂಡವರಲ್ಲ. ಹಾಗಾಗಿ ಅವರ ಜೀವನ ಯಾವಾಗಲೂ ಸುಖ-ಸಂತೋಷದಲ್ಲೇ ಕಳೆದಿತ್ತು' ಹೀಗೆ ತಮ್ಮ ಬದುಕಿನ ನೋವು-ಕಹಿಗಳನ್ನು ವಾಸಂತಿ ಬಿಚ್ಚಿಡ ಬಲ್ಲರು, ಬಿಚ್ಚಿಟ್ಟಿದ್ದಾರೆ.

ಅನುಪಮಾ, ವಾಸಂತಿ-ಇವರೆಲ್ಲರ ಆತ್ಮಚರಿತ್ರೆಯಲ್ಲಿ ಅವರ ಬರಹದ ಬದುಕಿಗೆ ತುಂಬ ಕಡಿಮೆ ಗಮನ ಸಿಕ್ಕಿದೆ. ವಾಸಂತಿಯವರಲ್ಲಿ ಒಂದೆರಡು ವಾಕ್ಯಗಳಲ್ಲಿ, ಕೆಲವು ಸಂದರ್ಭಗಳಲ್ಲಿ ಬರಹದ ಪ್ರಸ್ತಾಪ ಮಾಡುವುದನ್ನು

ಬಿಟ್ಟರೆ ಅವರು ಯಾವಾಗ ಏನು ಬರೆದರು, ಅವರ ಬರಹ ಜೀವನದ ಒಳ ವಿವರಗಳೇನು ಎಂಬುದು ತಿಳಿಯುವುದಿಲ್ಲ. ಲೇಖಕಿಯಾಗಿ ಅವರನ್ನು ಸಮಾಜ ಸರಿಯಾಗಿ ಸಕಾಲಕ್ಕೆ ಗುರುತಿಸಿದ್ದರೆ ವಾಸಂತಿಯಂಥವರ ಬರಹದ ಬದುಕಿನ ಸ್ವರೂಪವೇ ಬೇರೆಯಾಗಿರುತ್ತಿತ್ತೋ ಏನೋ.

ಅನುವಾದ, ಆತ್ಮ ಕಥಾನಕಗಳನ್ನು ಬಿಟ್ಟರೆ ವಾಸಂತಿ ಅವರು ತಮ್ಮನ್ನು ಅಭಿವ್ಯಕ್ತಿಸಿಕೊಂಡದ್ದು ಸಣ್ಣಕಥೆಗಳಲ್ಲಿ ನನಗೆ ಲಭ್ಯವಾದ ಕೆಲವು ಕಥೆಗಳನ್ನು ಆಧರಿಸಿ ಅವರ ಕಥಾಬರಹದ ಬಗ್ಗೆ ಕೆಲವು ಮಾತುಗಳನ್ನು ಇಲ್ಲಿ ಹೇಳಬಹುದು. 1937ರಲ್ಲಿ ದ.ಬಾ. ಕುಲಕರ್ಣಿಯವರು 'ರಂಗವಲ್ಲಿ' ಕಥಾ ಸಂಕಲನದಲ್ಲಿ ವಾಸಂತಿಯವರ 'ಮೋಹಿನಿ' ಕಥೆಯನ್ನು ಪ್ರಕಟಿಸುತ್ತಾ ಲೇಖಕಿಯ ಬಗೆಗೆ ಹೀಗೆಂದಿದ್ದಾರೆ. "ಇವರ ಕಥಾವಸ್ತುಗಳು ಸಮಾಜ ಸಾಮಾನ್ಯವಾದುವು ; ಬಹುಶಃ ಹಾರ್ದಿಕವಾದವು. ಇವರ ಭಾಷಾಪ್ರವಾಹವು ಶಾಂತವಾಗಿ ಗಂಭೀರವಾಗಿ ಹರಿಯುತ್ತಿದ್ದರೂ ಭಾವನೆಗಳ ಒತ್ತಡದಿಂದ ಅದರ ತೆರೆಗಳು ಒಮ್ಮೊಮ್ಮೆ ಒತ್ತಟ್ಟಿಗೆ ತೆರಳುತ್ತಿರುವುದಿಲ್ಲ. ಕತೆಗಳಲ್ಲಿ ವಿಚಾರಗಳನ್ನು ಮಂಡಿಸುವುದು ಹಟವೆಂದು ಇವರು ತಿಳಿದಂತಿದೆ. ಸರಳ ಜೀವನವನ್ನು ಸರಳಹೃದಯದಿಂದ ಚಿತ್ರಿಸುವುದೇ ಇವರ ವೈಶಿಷ್ಟ್ಯ.... ಹೆಣ್ಣಿನ ಪ್ರೇಮವಿಶಿಷ್ಟ ಜೀವನ, ಗಂಡಿನ ವ್ಯವಹಾರ ವಿಶಿಷ್ಟ ಜೀವನ–ಇವುಗಳ ಘರ್ಷಣವನ್ನು ಸೂಚ್ಯವಾಗಿ ಈ ಕಥೆ ಹೇಳಿದೆ, 'ಮೋಹಿನಿ' ಕಥೆಯಲ್ಲಿ ಬಡತನದಿಂದ ಘಾಸಿಗೊಂಡಿದ್ದ ತಾಯಿ ಮಗಳ ಸಂಸಾರದಲ್ಲಿ ಆಗುಂತಕನೊಬ್ಬ ಪ್ರವೇಶಿಸುತ್ತಾನೆ. ಅವನ ಊಟ-ವಾಸ್ತವ್ಯಗಳನ್ನು ಅವರು ನೋಡಿಕೊಳ್ಳುತ್ತಾರೆ, ಪ್ರತಿಯಾಗಿ ಅವನು ಕೊಡುತ್ತಿದ್ದ ಹಣದಿಂದ ಅವರ ಆರ್ಥಿಕ ಪರಿಸ್ಥಿತಿ ಸುಧಾರಿರಿತು. ಈ ಸಂಬಂಧವನ್ನು ಆತ ವ್ಯಾವಹಾರಿಕವಾಗಿ ಕಂಡರೆ ಆ ಹೆಂಗಸರು, ಅದರಲ್ಲೂ ಮಗಳು ತೀವ್ರವಾಗಿ ಆತನನ್ನು ಹಚ್ಚಿಕೊಳ್ಳುತ್ತಾಳೆ. ಆ ಭಾವ ತೀವ್ರತೆಯನ್ನು ಆತ ಅನುಭವಿಸುವುದೂ ಇಲ್ಲ, ಅರ್ಥಮಾಡಿಕೊಳ್ಳುವುದೂ ಇಲ್ಲ ಆತ ವರ್ಗವಾಗಿ ಹೋದ ನಂತರ ಮಗಳು ಈ ಅಗಲಿಕೆಯ ಒಳನೋವಿನಲ್ಲಿ ಅಸು ನೀಗುತ್ತಾಳೆ, ಅದನ್ನು ಕಂಡು ಹುಚ್ಚಿಯಾದ ತಾಯಿಯೂ ಆಕಸ್ಮಿಕದಲ್ಲಿ ಸಾವಿಗೀಡಾಗುತ್ತಾಳೆ. ನಿರೂಪಕನೂ ಕಥಾನಾಯಕನೂ ಆದ ಪಾತ್ರದ ಮೂಲಕ ಭಾವತೀಕ್ಷ್ಣತೆ ತೋರಿಸದ ದನಿಯಲ್ಲಿ ಈ ಎಲ್ಲವನ್ನೂ ನಿರೂಪಿಸುತ್ತಲೇ ಈ ಘಟನೆಗಳ ಹಿಂದಿನ ಭಾವ ತೀಕ್ಷ್ಣತೆಯನ್ನು ಓದುಗರಿಗೆ ಮುಟ್ಟಿಸುವುದು ಈ ಕಥೆಯ ವಿಶೇಷ. ಗಂಡು-ಹೆಣ್ಣಿನ ಜೀವನ ಗ್ರಹಿಕೆಯ ನೆಲೆಗಳೇ ಬೇರೆಯಾಗಿ, ಕೂಡಿ ಹರಿಯುವುದಕ್ಕಿಂತ ಸಮಾನಾಂತರವಾಗಿ ಹರಿಯುವ ಬದುಕು ಇಲ್ಲಿ ಮತ್ತು ಇಂಥ ಕಥೆಗಳಲ್ಲಿ ಕಾಣುತ್ತದೆ. ಪ್ರೇಮ ತೀವ್ರತೆಯಿಂದ ತನ್ನನ್ನು ತಾನು ಘಾಸಿಗೊಳಿಸಿಕೊಳ್ಳುವುದು, ನಾಶ ಮಾಡಿಕೊಳ್ಳುವುದು ಇಂಥ ಕಥೆಗಳಲ್ಲಿದ್ದರೆ ಆ ತೀವ್ರತೆಯಿಂದ ಮತ್ತೊಂದು ಬದುಕನ್ನು ನಾಶಮಾಡುವಿಕೆ 'ತ್ಯಾಗವೋ ಒಪ್ಪಿಗೆಯೋ'–ದಂಥ ಕಥೆಯಲ್ಲಿದೆ. ಅಕ್ಕನ ಗಂಡನಾಗುವವನನ್ನೇ ಮೋಹಿಸಿ ಅಕ್ಕನನ್ನು ಅವನು ಮದುವೆಯಾಗುವುದಕ್ಕೆ ಮುನ್ನವೇ ಆತನನ್ನು ಕೊಂದ ನಾಯಕಿ ಈ ಕಥೆಯಲ್ಲಿದ್ದಾಳೆ. ಪಶ್ಚಾತ್ತಾಪವೇ ಅವಳ ಮುಂದಿನ ಬದುಕನ್ನು ರೂಪಿಸುತ್ತದೆ. ಅಕ್ಕನಂತೆ ತಾನೂ ಕನ್ಯತ್ವವನ್ನು ಸ್ವೀಕರಿಸಿ ಅಕ್ಕನೊಂದಿಗೇ ಬದುಕು ಸವೆಸುತ್ತಾಳೆ.

ಮದುವೆಯ ಚೌಕಟ್ಟಿನ ಹೊರಗಿನ ಗಂಡು-ಹೆಣ್ಣಿನ ಸಂಬಂಧದ ವೈಪರೀತ್ಯ, ತೀವ್ರತೆಗಳು ವಾಸಂತಿಯವರ ಕಥಾಭಿತ್ತಿಗಳಾಗಿರುವಂತೆಯೇ ಸಂಸಾರದೊಳಗಿನ ಭಾವ ಶೂನ್ಯ ಸಂಬಂಧವನ್ನೂ ವಾಸಂತಿ ತಮ್ಮ ಕಥಾಭಿತ್ತಿಗಳಾಗಿ ಆಯ್ದುಕೊಂಡಿದ್ದಾರೆ. 'ಪುನರ್ಜೀವನ' ಕಥೆಯಲ್ಲಿ ಗಂಡ ಹೆಂಡತಿಯಲ್ಲಿದ್ದ ಭಾವಸಾಮರಸ್ಯದ ಅಭಾವ ಕಥಾ ಕೇಂದ್ರವಾಗಿದೆ. ಭಾವತೀವ್ರತೆಯುಳ್ಳ, ಅದನ್ನು ಹೆಂಡತಿಯಿಂದಲೂ ಆಸೆ ಪಡುವ, ಕಲಾವಿದನೂ ಆದ ಗಂಡನು ಹೆಂಡತಿಯ ತಣ್ಣಗಿನ, ಭಾವ ರಹಿತ ನಡಾವಳಿಯಿಂದ ತೀರ ಬೇಸತ್ತಿರುತ್ತಾನೆ. ಆದರೆ ವಾಸಂತಿಯವರಲ್ಲಿ ಆಶಾವಾದ ಜ್ವಲಂತವಾಗಿದೆ. ಇಂಥ ಕೆಲವು ಕಥೆಗಳಲ್ಲಿ ಅಂತ್ಯ ಸಿನೀಮಿಯವಾಗಿ ಕಂಡರೂ ಒಂದು ಹೊಸ ತಿರುವು ಬದುಕಿಗೆ ಬೆಳಕನ್ನು ತರುತ್ತದೆ. 'ಪುನರ್ಜೀವನ' ಎಂದು ಕಥೆಯನ್ನು ಕರೆಯುವಲ್ಲಿ ಹಾಗೂ ಕೊನೆಯ ಆಕಸ್ಮಿಕದಲ್ಲಿ ಸಭಾವ ಸಂಬಂಧವನ್ನು ಕಟ್ಟುವಿಕೆಯಲ್ಲಿ ಲೇಖಕಿಯ ಜೀವನ ನಿರೀಕ್ಷೆಯೂ ಇಣುಕಿರುವಂತಿವೆ. ದಾಂಪತ್ಯವನ್ನು ಕಾಡುವ ಸಂಶಯವೂ ವಾಸಂತಿಯವರನ್ನು ಕಾಡಿದೆ. 'ಸಂಶಯ ಪಿಶಾಚಿ'

ಕಥೆಯಲ್ಲಿ ಗಂಡನ ನಡವಳಿಕೆಯನ್ನು ಸಂಶಯಿಸಿದ ಪತ್ನಿ ತನ್ನ ಭ್ರಮೆಯಿಂದ ಹೊರಬರುತ್ತಾಳೆ. ತನ್ನ ಸಂಶಯ ನಿರಾಧಾರವೆಂಬುದು ತಿಳಿದಾಗ ಸಂಸಾರದಲ್ಲಿದ್ದ ಭಾವ ವಿಪ್ಲವ ಶಾಂತವಾಗುತ್ತದೆ. 'ನಲಿನಿಯ ಸಂಸಾರ' ಕಥೆಯ ನಲಿನಿ ಕೂಡ ಪ್ರೀತಿಯ ಬಡತನದಲ್ಲಿ ಕೊರಗುವವಳೇ ಆಗಿದ್ದಾಳೆ. ಹೀಗೆ ವಾಸಂತಿಯವರ ಕಥೆಗಳಲ್ಲಿ ಮಹಿಳೆಯ ಅತೃಪ್ತ, ಅಶಾಂತ ಭಾವಜೀವನ ಪ್ರತಿಬಿಂಬಿತವಾಗಿದೆ. ಗಂಡು-ಹೆಣ್ಣಿನ ಅರ್ಥಪೂರ್ಣವೂ ಭಾವಸಂಪನ್ನವೂ ಆದ ಸಂಬಂಧದ ಅಭಾವ ಮತ್ತೆ ಮತ್ತೆ ಇಂಥ ಕಥೆಗಳಲ್ಲಿ ಕಾಣುತ್ತದೆ. ಕೆಲವು ಕಥೆಗಳಲ್ಲಿ ಈ ಅಭಾವ ತೊಲಗಿ ಭಾವಸಾಮರಸ್ಯದ ಬೆಳಕು ಮೂಡಿದರೂ ಆಶಯದ ಮಟ್ಟವನ್ನು ಬಿಟ್ಟು ಮೇಲೇರಿ ಈ ಬೆಳಕು ಓದುಗರ ಕಣ್ಣಿಗೆ ಇಳಿಯುವುದಿಲ್ಲ.

ಆರ್ಥಿಕ-ಸಾಮಾಜಿಕ ಒತ್ತಡಗಳಲ್ಲಿ ಕುಟುಂಬಗಳು, ಕುಟುಂಬಗಳೊಳಗಿನ ವ್ಯಕ್ತಿಗಳು ಹಾಗೂ ವ್ಯಕ್ತಿಸಂಬಂಧಗಳು ಹೇಗೆ ನರಳಬೇಕಾಗುತ್ತದೆ ಎಂಬುದನ್ನು ವಾಸಂತಿಯವರ ಕೆಲವು ಕಥೆಗಳು ಕಾಣಿಸುತ್ತವೆ. 'ವರದಕ್ಷಿಣೆ' ಎಂಬ ಲೇಖಕಿಯ ಮೊದಲ ಕಥೆ ವರದಕ್ಷಿಣೆಯ ಕರಾಳ ಮುಖವನ್ನು ಚಿತ್ರಿಸುತ್ತದೆ. ಬಡತನ, ದೊಡ್ಡಸಂಸಾರದ ಹೊಣೆಯಲ್ಲಿ ವರದಕ್ಷಿಣೆ ಕೊಡಲಾಗದೆ ಒದ್ದಾಡುತ್ತಿರುವ ತನ್ನ ತಂದೆ ತಾಯಿಗಳ ಸ್ಥಿತಿಗೆ ನೊಂದು ಹುಡುಗಿ ಆತ್ಮಹತ್ಯೆ ಮಾಡಿಕೊಳ್ಳುವಲ್ಲಿ ಕಥೆ ಕೊನೆಗೊಂಡಿದೆ. ಆ ಕಾಲದ ಇತರ ಲೇಖಕ - ಲೇಖಕಿಯರಂತೆ ವಾಸಂತಿಯವರೂ ಈ ಕಥೆಯಲ್ಲಿ ಮಹಿಳಾ ಶಿಕ್ಷಣದ ಅಗತ್ಯವನ್ನು ಹೇಳುತ್ತಾರೆ.

'ಸಮಾಜದ ಅಗ್ನಿಕುಂಡ' ಕಥೆಯಲ್ಲಿ ಸಾಮಾಜಿಕ-ಆರ್ಥಿಕ-ಕೌಟುಂಬಿಕ ಸಮಸ್ಯೆಗಳು ಮುಪ್ಪರಿಗೊಂಡಿವೆ. ತಾಯಿಯನ್ನು ಕಳೆದುಕೊಂಡು ತಂದೆಯ ಕ್ರೌರ್ಯಕ್ಕೆ ತುತ್ತಾದ ಮಕ್ಕಳ ಜೀವನಚಿತ್ರ ಇದಾಗಿದೆ. ತಂದೆಯಾದವನ ಮೇಲಿರುವ ಆರ್ಥಿಕ ಒತ್ತಡ ಒಂದಾದರೆ ಆತನ ಮರುಮದುವೆಯ ಹಿನ್ನೆಲೆಯ ಒತ್ತಡ ಮತ್ತೊಂದು. ತಂದೆಯ ಆರ್ಥಿಕ, ನೈತಿಕ, ಭಾವನಾತ್ಮಕ ಬೆಂಬಲವನ್ನು ಕಳೆದುಕೊಂಡ ಮಕ್ಕಳು ದಿಕ್ಕುಕಾಣದ ತಬ್ಬಲಿಗಳಾಗಿ ಸಾವು - ಆತ್ಮಹತ್ಯೆಯ ದಡವನ್ನು ಸೇರುತ್ತಾರೆ. ಆತ್ಮಹತ್ಯೆ ಮಾಡಿಕೊಳ್ಳುವ, ಆತ್ಮಹತ್ಯೆಗಾಗಿ ಯತ್ನಿಸುವ ನಾಯಕಿಯರು ವಾಸಂತಿಯವರ ಕಥಾ-ಲೋಕದಲ್ಲಿ ಮತ್ತೆ ಮತ್ತೆ ಕಾಣುತ್ತಾರೆ.

ದುಡಿಯುವ ಅವಿವಾಹಿತ ಮಹಿಳೆಯರ ಇಕ್ಕಟ್ಟನ್ನು ವಾಸಂತಿಯವರ ತಲೆಮಾರಿನವರೇ ಗುರುತಿಸಿರುವುದು ಗಮನಾರ್ಹ. ಇಂಥ ಮಹಿಳೆಯರು ನಗರಜೀವನದ ಆರ್ಥಿಕ ಇಕ್ಕಟ್ಟನ್ನೂ ಮನೆಯಲ್ಲಿ ಅಸಹಾಯಕರ ಅವಲಂಬನೆಯ ಹೊರೆಯನ್ನೂ ಹೊತ್ತವರು. ಅಸಹಾಯಕರಲ್ಲದವರೂ ತಮ್ಮ ಬೇಜವಾಬ್ದಾರಿಯಿಂದ ಇಂಥವರನ್ನು ಶೋಷಿಸುತ್ತಾರೆ. ಇಂಥ ಸಂದರ್ಭದ ದುರುಪಯೋಗವನ್ನು ಪಡೆಯಬಯಸುವ ಸ್ವಾರ್ಥಿಗಳ ಹೊಂಚನ್ನೂ ಸಂದರ್ಭವನ್ನು ತಿಳಿಯಲು ಪ್ರಯತ್ನಿಸದೆ ಛಾಯಿಚಪಲಕ್ಕೆ ಯಾರನ್ನಾದರೂ ಗುರಿಮಾಡುವ ಸಮಾಜವನ್ನು ಈ ಮಹಿಳೆಯರು ಎದುರಿಸಬೇಕಾಗುತ್ತದೆ. ವಾಸಂತಿಯವರ 'ಸಮಸ್ಯೆ' ಕಥೆಯು ಇಂಥ ಇಕ್ಕಟ್ಟನ್ನು ಬಿಂಬಿಸಿದೆ. ವ್ಯಾಸರಾಯಬಲ್ಲಾಳ, ತ್ರಿವೇಣಿ ಮೊದಲಾದವರೂ ಈ ಸೂಕ್ಷ್ಮ ಇಕ್ಕಟ್ಟಿನ ಸವಾಲನ್ನು ತಮ್ಮ ಬರಹಗಳಲ್ಲಿ ಎದುರಿಸಿದ್ದಾರೆ.

'ಒಂದು ಸಮಸ್ಯೆ' ಕಥೆಯಲ್ಲಿ ಅಷ್ಟಗ್ರಹ ಕೂಟದ ಸಂದರ್ಭದ ಜನರ ದಿಗಿಲನ್ನು, ಮೂಢನಂಬಿಕೆಯನ್ನು ಬಿಡಿಸಿಟ್ಟಿದ್ದಾರೆ. ಈ ದಿಗಿಲು ಮತ್ತು ವರ್ತಮಾನದ ಸೆಳೆತ, ನಿರಾತಂಕ-ಎಲ್ಲವೂ ನಮ್ಮ ದಿನಚರಿಯ ಕ್ಷಣಗಳಲ್ಲಿ ಬೆರೆತಿರುವುದನ್ನು ಲೇಖಕಿ ಅನಾಯಾಸವಾಗಿ ಕಾಣಿಸುತ್ತಾರೆ. ಬಸ್ಸಿನಲ್ಲಿ ಆಕಸ್ಮಿಕವಾಗಿ ಸಿಕ್ಕಿದ ಅಪರಿಚಿತ ಪುರೋಹಿತರು ಹೇಳಿದ ಭವಿಷ್ಯ ನುಡಿಯಿಂದ ಕಥಾನಾಯಕ ಬೆದರುತ್ತಾನೆ. ಅಷ್ಟಗ್ರಹದ ಕಥೆಗಳು, ಪ್ರಕರಣಗಳು ಒಂದರ ಬೆನ್ನಿಗೆ ಒಂದರಂತೆ ಬರುತ್ತವೆ. ಭವಿಷ್ಯದ ಬಗೆಗಿನ ದಿಗಿಲನ್ನು ಕೂಡ ವರ್ತಮಾನದ ಒತ್ತಡ ಮರೆಸುತ್ತದೆ. ಅಷ್ಟಗ್ರಹಕೂಟದ ದುಷ್ಪರಿಣಾಮದ ನಿವಾರಣೆಗೆಂದು ದಾನಮಾಡಿ ಬಂದು ತಿಂಗಳ ಖರ್ಚನ್ನು ಹೇಗೆ ತೂಗಿಸುವುದೆಂದು ಗಂಡಹೆಂಡಿರಿಬ್ಬರೂ ಒದ್ದಾಡುತ್ತಾರೆ. ದಿನದ ಕೊನೆಯಲ್ಲಿ ಅಷ್ಟಗ್ರಹಗಳು ಮರೆಯಾಗಿ ಮನೆಗೆ ಬಂದಿದ್ದ ಸ್ನೇಹಿತನು ಸಂಸಾರವಂದಿಗನಾಗದಿರುವುದನ್ನು ಯೋಚಿಸುತ್ತಾ ಕಥಾನಾಯಕ ನಿದ್ದೆಹೋಗುತ್ತಾನೆ. ಮನಸ್ಸಿನ ಇಂಥ ಜಗಿತ, ಸ್ಥಿತ್ಯಂತರಗಳು ಸಹಜವಾಗಿ ಕಥೆಯಲ್ಲಿ ಹರಿದುಬಂದಿದೆ.

ಈವರೆಗೆ ಗಮನಿಸಿದಂತೆ ವಾಸಂತಿಯವರ ವಸ್ತು-

ವಿಚಾರಗಳು ಸಕಾಲಿಕವೂ ಮುನ್ನೋಟವುಳ್ಳವೂ ಆಗಿವೆ ಎಂಬುದು ಗಮನಿಸಬೇಕಾದ್ದೇ ಆಗಿದೆ. ಆದರೆ ನನಗೆ ದೊರೆತ ಕಥೆಗಳ ಆಧಾರದಿಂಡ ಹೇಳುವುದಾದರೆ ಹೆಚ್ಚಿನ ಕಥೆಗಳು ಸಾವಕಾಶವಾಗಿ ಪೂರ್ಣವಾಗಿ ಅರಳಲು ಸಾಧ್ಯವಾಗಿಲ್ಲ. ಅನೇಕ ಕಥೆಗಳಲ್ಲಿ ಇದ್ದಕ್ಕಿದ್ದಂತೆ ಕಥೆ ದಿಕ್ಕು ಬದಲಿಸುತ್ತದೆ. ಆದರೆ ಅಂಥ ಬದಲಾವಣೆಗೆ ಬೇಕಾದ ಆವರಣವನ್ನು ಕಥೆ ಕಟ್ಟಿರುವುದಿಲ್ಲ. ಹೀಗಾಗಿ ಎಷ್ಟೋ ಸಲ ಕಥೆಗಳು ಕಥೆಗಳಾಗಬೇಕಾಗಿದ್ದ ಕರಡುಗಳಂತೆ ಕಾಣುತ್ತವೆ. ವಾಸಂತಿಯವರಿಗಿದ್ದ ಅನುಭವ ವ್ಯುತ್ಪತ್ತಿಗಳ ಹಿನ್ನೆಲೆಯಲ್ಲಿ ಇನ್ನೂ ಬಲವಾದ ಆಳವಾದ ಕಥೆಗಳು ಕನ್ನಡಕ್ಕೆ ಅವರಿಂದ ದೊರಕಬಹುದಾಗಿತ್ತು.

ಆದರೆ ಅವರ ಜೀವನ ಹೋರಾಟದಲ್ಲಿ ವಾಸಂತಿಯವರ ಒಳಗಿದ್ದ ಕಲಾವಿದೆ ಪೂರ್ಣವಾಗಿ ವಿಕಸನಹೊಂದಲು ಸಾಧ್ಯವಾದಂತೆ ಕಾಣುವುದಿಲ್ಲ. ಆದರೂ ಅವರ ಗಮನಾರ್ಹ ಕೊಡುಗೆ ಅನುವಾದ ಮತ್ತು ಆತ್ಮಕಥಾನಕಗಳ ಕ್ಷೇತ್ರಕ್ಕೆ ಸಂದಿದೆ. ಮಹಿಳಾ ಜೀವನದ ಒಳಬೇಗುದಿಗಳನ್ನೂ ಕೌಟುಂಬಿಕ ಇಕ್ಕಟ್ಟುಗಳನ್ನೂ ಹೈರಾಣವಾಗಿಸುವ ದುಡಿಮೆಯನ್ನು ವಾಸಂತಿಯವರ ಆತ್ಮಕಥನ ಧೈರ್ಯ ಮತ್ತು ಮುಕ್ತತೆಯಿಂದ ಬಿಚ್ಚಿಟ್ಟದ್ದು ಬೆರಗುಗೊಳಿಸುವ ಸಂಗತಿಯಾಗಿದೆ.

**ವಿಜಯಾ ದಬ್ಬೆ**

---

## ನನ್ನ ಪುಸ್ತಕ

ಹೆಣ್ಣಿನ ನೋವಿನಲ್ಲಿ
ಗಂಡಿನ ಹಸಿವಿನಲ್ಲಿ
ಹುಟ್ಟಿದ ಪುಸ್ತಕವ
ನಾ ಬರೆದಿರುವೆ.

ಆದರೆ
ಯಾರೂ ಓದಲಿಲ್ಲ ;
ಅವರಿಗಿರಲಿಲ್ಲ ಸಮಯ.
ಓದುವ ಕೊಠಡಿಗಳಲ್ಲಿ
ಗ್ರಂಥಾಲಯಗಳಲ್ಲಿ
ಅದು ಕಾಣಲಿಲ್ಲ.

ಯಾರಿಗೂ ಬೇಡದ
ಈ ಪುಸ್ತಕದಲ್ಲಿ
ಆಹಾರಕ್ಕಾಗಿ
ಕಾಮತೃಪ್ತಿಗಾಗಿ
ಗಂಡಿನ ಹಸಿವ ದಾಖಲಿಸಿದ್ದೇನೆ

ಅವನು ಹಸಿದಾಗ
ಅಡಿಗೆ ಮಾಡುತ್ತೇನೆ ;
ಕಾಮಾತುರನಾದಾಗ
ನಾನೇ ಆಹಾರವಾಗುತ್ತೇನೆ

ಕದನ ಕಲಿಯಾದವನು
ಮಾನವತೆಯ ಸಾಕಾರವಲ್ಲವೆ ?
ತನ್ನ ಹಸಿವ ನೀಗಲು
ನನ್ನನಿಡಿಯಾಗಿ ನುಂಗಲು
ಅವನಿಗೆ ಹಕ್ಕಿಲ್ಲವೆ ?

ತನ್ನ ಕೃತಿಗತಿಗಳ ಮೆರೆಸಲು
ನನ್ನ ಪುಸ್ತಕವ ಸುಡುವುದು
ಅವನ ಹಕ್ಕಲ್ಲವೆ ?

ಆದರೂ ಬರೆಯುತ್ತೇನೆ–
ಅದರದೇ ಭಸ್ಮದಿಂದ
ಮರುಜನ್ಮ ನೀಡುತ್ತೇನೆ - ಮತ್ತೆ ಮತ್ತೆ
ವೇಶ್ಯಾವಾಟಿಕೆಗಳಿಂದ
ಅನಾಥಾಲಯಗಳಿಂದ
ರಕ್ಷಣಾಗೃಹಗಳಿಂದ
ಬಂಧೀಖಾನೆಗಳಿಂದ
ದುಃಖ ನೋವುಗಳ ಸಂಚಯಿಸುತ್ತೇನೆ
ಹೋರಾಡುತ್ತೇನೆ–
ಮಹಿಳೆಯ ಮಾನವತೆಯ ಪ್ರತಿಪಾದನೆಗಾಗಿ
ನನ್ನ ಪುಸ್ತಕಕ್ಕೆ ವಿಶ್ವದಲ್ಲೊಂದು ನೆಲೆಗಾಗಿ

ಮಣಿಮಾಲಾ

ಅನು : **ನೇಂ. ವನಜ**

# ' ನ ಟ ನೆ '

ಎಷ್ಟೊಂದು ತಣ್ಣಗಿನ
ನಿರ್ಲಿಪ್ತ ಹೆಣ್ಣು :
ಈಕೆ, ತನ್ನ ಮುಂದಿನ ಕಾಲುಹಾದಿಯನ್ನೂ
                    ತಣ್ಣಗೆ ದಾಟುತ್ತಾಳೆ
ಅ–ಥ–ವಾ–
ದಾಟಿದವಳಂತೆ ನಟಿಸುತ್ತಾಳೆ
ಸುತ್ತಲಿನ ಸಮೂಹವನ್ನು ಕುಹಕದಿಂದ
                    ನೋಡುತ್ತಾಳೆ
ಹುಡುಗರ ಗುಂಪನ್ನು ಕಂಡು ;
                    ಕಟಕಿಯಾಡುತ್ತಾಳೆ
ಮುದ್ದು ಹುಡುಗಿಯರ ನಗುವಿಗೆ
                    ಕಿವಿ ಮುಚ್ಚಿ ಕೂರುತ್ತಾಳೆ
ಸೋತ ಹೆಣ್ಣುಗಳ ಕಣ್ಣೀರು; ನಿಟ್ಟುಸಿರ ಕಂಡು
ಅವಹೇಳನ ಮಾಡಿ ನಗುತ್ತಾಳೆ
ಕಣ್ಣಾರೆ ಕಂಡ ಸತ್ಯವನ್ನೂ-ತರ್ಕದಲಿ ಜಾಲಾಡಿ
ಅಪನಂಬಿಕೆಯಿಂದ ಧಿಕ್ಕರಿಸಿ ಬಿಡುತ್ತಾಳೆ
ಯಾರನ್ನೂ ನಂಬಬೇಡಿರೆಂದು ;
ಶಾಲೆಯಲ್ಲಿ ಮಕ್ಕಳ ಮುಂದೆ ಪಾಠ-
                    ಹೇಳುತ್ತಾಳೆ.
ಭಾವನೆಗಳ ತೊನೆದಾಟವನ್ನು ಕಾಲಿನಿಂದೊದ್ದು
                    ತಿರಸ್ಕರಿಸುತ್ತಾಳೆ
ಆದರೂ ಆವೇಗದ ಹಂಬಲಿಕೆ
ಮುಖ ಮಾರಿ - ಕಣ್ಣಾಲಿಗಳಲ್ಲಿ
ಹನಿ ಹನಿಗಳಾಗಿ ತುಂಬಿ
ಎದೆಯ ಮೇಲೆ ಬಿದ್ದು, ಇಂಗಿ ಹೋಗುವಾಗ
ಸೋತ ಕ್ಷಣಗಳ ನೋವು ;
ಯಾರೂ ಕಾಣಬಾರದೆಂದು
ಸುತ್ತಲಿನ ಬಾಗಿಲು - ಕಿಟಕಿಗಳನ್ನು
' ರಪ್ಪನೆ '
ಮುಚ್ಚಿ ಬಿಡುತ್ತಾಳೆ !

● ನಿರ್ಮಲ ಆರ್.

REGD NO. KRNA 271




# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ




C.G. MANJULA
9, 3rd Cross
Markham Road
Ashok Nagar
BANGALORE- 560 025.

BOOK-POST
BOOK-POST

ವಿಳಾಸ

" ಮಾನಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067